the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR. 158/10-11, DATED 21-02-2011**

It is clarified that 'Vanilla beans', are taxable at 5% under entry 89 of the Third Schedule to the Karnataka Value Added Tax Act, 2003 .

**PRADEEP SINGH KHAROLA**

Commissioner of Commercial Taxes,

(Karnataka), Bangalore.

**P.R. No: 279**

## COMMERCIAL TAXES DEPARTMENT

### PROCEEDINGS OF THE COMMISSIONER OF COMMERCIAL TAXES, (KARNATAKA), BANGALORE- CLARIFICATION UNDER SECTION 59(4) OF THE KARNATAKA VALUE ADDED TAX ACT, 2003.

**Sub** : KVAT Act, 2003 - Clarification under Section 59(4) regarding the rate of tax applicable on 'red oxide' -reg.,

**Ref**: Application dated: 26-10-2010 of Sri Habebulla, Proprietor, Rolex Enterprises, #37, 1st Floor, S.P.Road, Bangalore- 560 002.

* * * *

In the application cited above Sri Habebulla, Proprietor, Rolex Enterprises, Bangalore- 560 002.has sought clarification regarding the rate of tax applicable on 'red oxide' falling under CET Code 3206 4910.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR. 185/10-11, DATED 23-02-2011**

It is clarified that 'colouring material sold as red oxide or any other name` falling under CET Code 3206 4910 is not notified as an industrial input under the Karnataka Value Added Tax Act, 2003 and therefore liable to tax at 13.5 under Section 4 (1) (b).

**PRADEEP SINGH KHAROLA**

Commissioner of Commercial Taxes,

(Karnataka), Bangalore.

**P.R. No: 280**

## COMMERCIAL TAXES DEPARTMENT

### PROCEEDINGS OF THE COMMISSIONER OF COMMERCIAL TAXES, (KARNATAKA), BANGALORE- CLARIFICATION UNDER SECTION 59(4) OF THE KARNATAKA VALUE ADDED TAX ACT, 2003.

**Sub:** KVAT Act, 2003 - Clarification under Section 59(4) regarding the rate of tax applicable on 'salted and masala cashew kernels'.

**Ref:** (1) Application dated 05.09.2008 of M/s Manak Mewa Stores, No. 19, Huriyopet, R.T.Street Cross, Bangalore.

(2) Proceedings of CCT (K), Bangalore vide No. CLR.CR.132/08-09, Dated: 30-10-2008.

(3) Applications of the dealer dated: 17-08-2009 and 26-07-2010.

****

In its application cited at ref (1), the dealer had sought clarification regarding the rate of tax applicable on 'salted & masala cashew kernels'. Pursuant to the same, it was clarified in the proceedings cited at ref (2) above that 'salted and masala cashew kernels' are taxable at 12.5% under Section 4(1) (b) of the Karnataka Value Added Tax Act, 2003.

2. Subsequently, the dealer in its applications cited at reference (3) above, has requested for revision of the clarification and has furnished a copy of the order of the Hon'ble High Court of Karnataka dated: 18-09-1995 in W.P.No.4800/1993 in the case of Achal Industries Vs CCT, wherein the Hon'ble High Court has held that even after roasting and salting of cashew kernels, the commodity continues to be cashew kernel and no commercially distinct product emerges by roasting and salting.

3. The matter has therefore been re examined.

4. Hence the following order:

**CLARIFICATION NO.CLR.CR.132/08-09, DATED 23-02-2011**

In modification of the clarification issued in proceedings No. CLR. CR. 132/08-09, dated: 30-10-2010, it is clarified that 'salted and masala cashew kernels' are taxable at 4% from 10.05.2006 upto 31.03.2010 as per notification No.FD 121 CSL 2006(l), dated: l0-05-06 and at 5% from 01-04-2010 as per notification No.FD 82 CSL 10 (III), dated: 31-03-2010.

**PRADEEP SINGH KHAROLA**

Commissioner of Commercial Taxes,

**P.R. No: 281** (Karnataka), Bangalore.

## COMMERCIAL TAXES DEPARTMENT

### PROCEEDINGS OF THE COMMISSIONER OF COMMERCIAL TAXES, (KARNATAKA), BANGALORE- CLARIFICATION UNDER SECTION 59(4) OF THE KARNATAKA VALUE ADDED TAX ACT, 2003.

**Sub**: KVAT Act, 2003 - Clarification under Section 59(4) regarding the rate of tax applicable on 'P.P. non woven fabrics ' reg.,

**Ref:** Application dated 16-11-2010 of Sheetal Rexine Centre, No.4 J.M.Lane, Balepet Cross, Bangalore-560 053.

****

In the application cited above, Sheetal Rexine Centre, Bangalore, has sought clarification regarding the rate of tax applicable on 'P.P. non woven fabrics '

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO.CLR.CR.190/10-11, DATED 15-03-2011**

It is clarified that 'P.P. non woven fabrics ' covered by CET Code 56031300 are exempt from tax as per entry 4 of First Schedule to the Karnataka Value Added Tax Act, 2003.

**PRADEEP SINGH KHAROLA**

Commissioner of Commercial Taxes,

**P.R. No: 373** (Karnataka), Bangalore.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಛೇರಿ

**ನಂ: ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್:29/2010-11, ದಿನಾಂಕ:30ನೇ ಡಿಸೆಂಬರ್ 2010**

**ವಿಷಯ:** ಸ್ಥಗಿತಗೊಂಡಿರುವ ಗೌಡಿಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಗೌಡಿಹಳ್ಳಿ ಹೊಳಲ್ಕರೆ ತಾಲ್ಲೂಕು ಇದನ್ನು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರ ಪತ್ರದ ಸಂ:ಸನಿ:30/ಸಮಾಪನೆ:ಸಿಆರ್:28/ 10-11 ದಿನಾಂಕ:12-11-2010.

2) ಈ ಕಛೇರಿಯ ಕಾರಣ ಕೇಳಿ ನೋಟೀಸು ಸಮ ಸಂಖ್ಯೆ ದಿನಾಂಕ: 16-11-2010.

3) ಡಿ ದರ್ಜೆ ನೌಕರರ ಹೊಳಲ್ಕೆರೆ ಇವರ ಪತ್ರ ದಿನಾಂಕ:20-12-2010.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಉಪ ವಿಭಾಗ, ಚಿತ್ರದುರ್ಗ ಇವರು ಉಲ್ಲೇಖ (1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಗೌಡಿಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಗೌಡಿಹಳ್ಳಿ ಹೊಳಲ್ಕರೆ ತಾಲ್ಲೂಕು ಸಂಘದ ನೋಂದಣಿ ಸಂಖ್ಯೆ:ಎಆರ್/ಆರ್‌ಜಿಎನ್/31048/ ದಿನಾಂಕ:09-03-1994 ಈ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲವಾಗಿರುತ್ತಾರೆ ಮತ್ತು ಸಂಘವನ್ನು ಪುನ:ಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲವೆಂದು ಪ್ರಸ್ತಾವನೆ ಸಲ್ಲಿಸಿ, ಸಂಘವನ್ನು ಸಮಾಪನೆಗೊಳಿಸಲು ಕೋರಿರುತ್ತಾರೆ. ಈ ಬಗ್ಗೆ ಉಲ್ಲೇಖ (2) ರ ನೋಟೀಸನ್ನು ಈ ಕಛೇರಿಯಿಂದ ನೀಡಿದ್ದು, ಸಂಘದ ಆಡಳಿತ ಮಂಡಳಿಯವರಿಗೆ ನೋಟೀಸು ಜಾರಿಯಾದ ಬಗ್ಗೆ ಉಲ್ಲೇಖ (3) ರಲ್ಲಿ ಸ್ವೀಕೃತಿ ಈ ಕಛೇರಿಗೆ ತಲುಪಿದೆ, ಆದಾಗ್ಯೂ ಅವರು ಯಾವುದೇ ಸಮಜಾಯಿಷಿ ಅಥವಾ ಪ್ರತಿಕ್ರಿಯೆಯನ್ನು ನೀಡದೇ ನಿರುತ್ಸಾಹ ತೋರಿಸಿರುತ್ತಾರೆ. ಈ ಸಂಘದಿಂದ ಸಂಘದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ, ಇದರಿಂದ ಸಂಘವು ಪುನ:ಶ್ಚೇತನಗೊಳಿಸುವ ಹಂತವನ್ನು ಮೀರಿರುತ್ತದೆ. ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಅಭಿಪ್ರಾಯ ಪಟ್ಟು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**"ಆದೇಶ"**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ನಂ:ಸಿಓ:201:ಸಿಎಲ್‌ಎಂ:2008/ ಬೆಂಗಳೂರು ದಿನಾಂಕ:27-05-2010 ರ ಪ್ರಕಾರ ದತ್ತವಾದ ಅಧಿಕಾರದನ್ವಯ ಇಲ್ಯಾಸ್ ಉಲ್ಲಾ ಷರೀಫ್ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ಆದ ನಾನು ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಸ್ಥಗಿತಗೊಂಡಿರುವ ಗೌಡಿಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಗೌಡಿಹಳ್ಳಿ ಹೊಳಲ್ಕರೆ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73 (1) ಅನ್ವಯ ಹಾಲು ವಿಸ್ತರಣಾಧಿಕಾರಿ, ಹೊಳಲ್ಕರೆ ತಾಲ್ಲೂಕು, ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73 (1) ಮತ್ತು 74 ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ:30-12-2010 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು.
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

ಪಿಆರ್-75

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಛೇರಿ

**ನಂ: ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್:31/2010-11, ದಿನಾಂಕ:30ನೇ ಡಿಸೆಂಬರ್ 2010**

**ವಿಷಯ:** ಸ್ಥಗಿತಗೊಂಡಿರುವ ಗುಂಡೇರಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ. ಗುಂಡೇರಿ, ಹೊಳಲ್ಕರೆ ತಾಲ್ಲೂಕು ಇದನ್ನು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರ ಪತ್ರದ ಸಂ:ಸನಿ:30/ಸಮಾಪನೆ:ಸಿಆರ್:30/ 10-11 ದಿನಾಂಕ:12-11-2010.

2) ಈ ಕಛೇರಿಯ ಕಾರಣ ಕೇಳಿ ನೋಟೀಸು ಸಮ ಸಂಖ್ಯೆ ದಿನಾಂಕ: 16-11-2010.

3) ಸಹಕಾರ ಸಂಘಗಳ ನಿರೀಕ್ಷಕರು, ಹೊಳಲ್ಕೆರೆ ಇವರ ಪತ್ರ ದಿನಾಂಕ:21-12-2010.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ಉಲ್ಲೇಖ (1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಗುಂಡೇರಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ. ಗುಂಡೇರಿ, ಹೊಳಲ್ಕರೆ ತಾಲ್ಲೂಕು ಸಂಘದ ನೋಂದಣಿ ಸಂಖ್ಯೆ:ಸನಿ:30:35/ ಆರ್‌ಜಿಎನ್/26844/2000-01 ದಿನಾಂಕ:19-08-2000 ಈ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ

ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲವಾಗಿರುತ್ತಾರೆ ಮತ್ತು ಸಂಘವನ್ನು ಪುನ:ಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲವೆಂದು ಪ್ರಸ್ತಾವನೆ ಸಲ್ಲಿಸಿ, ಸಂಘವನ್ನು ಸಮಾಪನೆಗೊಳಿಸಲು ಕೋರಿರುತ್ತಾರೆ. ಈ ಬಗ್ಗೆ ಉಲ್ಲೇಖ (2) ರ ನೋಟೀಸನ್ನು ಈ ಕಛೇರಿಯಿಂದ ನೀಡಿದ್ದು, ಉಲ್ಲೇಖ (3) ರಲ್ಲಿ ಸಂಘದ ಆಡಳಿತ ಮಂಡಳಿಯವರಿಗೆ ನೋಟೀಸು ಜಾರಿ ಮಾಡಿ ಸ್ವೀಕೃತಿ ಈ ಕಛೇರಿಗೆ ತಲುಪಿದ್ದು, ಆದಾಗ್ಯೂ ಅವರು ಯಾವುದೇ ಸಮಜಾಯಿಷಿ ಅಥವಾ ಪ್ರತಿಕ್ರಿಯೆಯನ್ನು ನೀಡದೇ ನಿರುತ್ಸಾಹ ತೋರಿಸಿರುತ್ತಾರೆ. ಈ ಸಂಘದಿಂದ ಸಂಘದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ, ಇದರಿಂದ ಸಂಘವು ಪುನ:ಶ್ಚೇತನಗೊಳಿಸುವ ಹಂತವನ್ನು ಮೀರಿರುತ್ತದೆ. ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಅಭಿಪ್ರಾಯ ಪಟ್ಟು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**"ಆದೇಶ"**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ನಂ:ಸಿಓ:201:ಸಿಎಲ್‌ಎಂ:2008/ ಬೆಂಗಳೂರು ದಿನಾಂಕ:27–05–2010 ರ ಪ್ರಕಾರ ದತ್ತವಾದ ಅಧಿಕಾರದನ್ವಯ ಇಲ್ಯಾಸ್ ಉಲ್ಲಾ ಷರೀಪ್ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ಆದ ನಾನು ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಸ್ಥಗಿತಗೊಂಡಿರುವ ಗುಂಡೇರಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ. ಗುಂಡೇರಿ, ಹೊಳಲ್ಕರೆ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ನೇ ಕಲಂ 73 (1) ಅನ್ವಯ ಸಹಕಾರ ಸಂಘಗಳ ನಿರೀಕ್ಷಕರು, ಹೊಳಲ್ಕೆರೆ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73 (1) ಮತ್ತು 74 ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ:30–12–2010 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು.
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

ಪಿಆರ್–76

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕರ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ ನಂ–1, ಚಿಕ್ಕಮಗಳೂರು**

**ಸಂಖ್ಯೆ:ಕಾಪಕಾ/ಎಫ್–12/2010, ದಿನಾಂಕ: 5ನೇ ಜನವರಿ 2011**

**ಅರ್ಜಿದಾರರು:** 1) ಶ್ರೀ ಬಾಷಾಸಾಬ್ ತಂದಿ ನನ್ನುಸಾಬ್

2) ಶ್ರೀಮತಿ ಖಾತೀಜ ಕೋಂ., ಭಾಷ ಸಾಬ್ ಇಬ್ಬರೂ ವಾಸ: ಹುಲುಗಾರು ಗ್ರಾಮ, ಕಾರಡಗಿ ಅಂಚೆ, ಸವಣೂರು ತಾಲ್ಲೂಕು, ಹಾವೇರಿ ಜಿಲ್ಲೆ;

**ವಿರುದ್ಧ**

**ಪ್ರತಿವಾದಿಗಳು:**

1) ಸಂತೋಷ ಕುಮಾರ ಮಾಲೀಕರು, ದಂಡೀಕೇರಿ ಕನ್ಸ್ಟ್ರಕ್ಷನ್ಸ್, ದಂಡೀಕೇರಿ ನಿಲಯ, ಯಯಾಡಿ ಪಡುವು, ಕೊಂಚಾಡಿ ಅಂಚೆ, ಮಂಗಳೂರು;
2) ಡೆಪ್ಯೂಟಿ ಚೀಫ್ ಇಂಜಿನೀಯರ್, ಭಾರತೀಯ ಜೀವ ವಿಮಾ ನಿಗಮ, ಜೀವನ ಪ್ರಕಾಶ್, ಜೆ.ಸಿ ರಸ್ತೆ, ಬೆಂಗಳೂರು–02;
3) ಶಾಖಾ ವ್ಯವಸ್ಥಾಪಕರು, ಭಾರತೀಯ ಜೀವ ವಿಮಾ ನಿಗಮ, ತರೀಕೆರೆ ಶಾಖೆ, ತರೀಕೆರೆ;
5) ಮೆ: ಯುನೈಟೆಡ್ ಇಂಡಿಯಾ ಇನ್ಸೂರನ್ಸ್ ಕಂಪನಿ ಲಿ., ಡಿವಿಜನಲ್ ಆಫೀಸ್, ಪಿ.ಬಿ.105, 1ನೇ ಫ್ಲೋರ್, ರಾಮ ಭವನ ಕಾಂಪ್ಲೆಕ್ಸ್, ಕೊಡಿಯಲ್ ಬೈಲ, ಮಂಗಳೂರು

**ಪ್ರಕಟಣೆ**

ಮೃತ ಹಜರತ್ ಅಲಿ, ದಿನಾಂಕ:03–09–2009ರಂದು 3ನೇ ಪ್ರತಿವಾದಿಯ ಬಳಿ ತರೀಕೆರೆಯಲ್ಲಿ ಕಾರ್ಮಿಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅಪಘಾತಕ್ಕೊಳಗಾಗಿ ತರೀಕೆರೆ ಸರ್ಕಾರಿ ಆಸ್ಪತ್ರೆಯಲ್ಲಿ ಮರಣ ಹೊಂದಿರುತ್ತಾರೆಂದು, ಈ ಕಾರಣ ಪರಿಹಾರಧನಕ್ಕಾಗಿ ಮೃತನ ವಾರಸುದಾರರ/ ಅವಲಂಬಿತರಾದ ಅರ್ಜಿದಾರರು ಕಾರ್ಮಿಕರ ಪರಿಹಾರ ಕಾಯ್ದೆ ಅಡಿಯಲ್ಲಿ ಒಂದು ದಾವೆ ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ದಾಖಲ್ ಮಾಡಿರುತ್ತಾರೆ. (ದಾವೆ ಅರ್ಜಿಯನ್ನು ಲಗತ್ತಿಸಿದೆ).

ಕಾರಣ, ಸಾರ್ವಜನಿಕವಾಗಿ, ಸಂಬಂಧಪಟ್ಟವರಿಗೆ ಈ ಮೂಲಕ ಪ್ರಕಟಪಡಿಸುವುದೇನೆಂದರೆ, ಈ ಮೇಲಿನ ಅರ್ಜಿದಾರರನ್ನು ಹೊರತುಪಡಿಸಿ, ಬೇರೆ ಇನ್ನಿತರರು ಯಾರಾದರೂ ಮೃತನ ಅವಲಂಬಿತರಾಗಲಿ, ವಾರಸುದಾರರಾಗಲಿ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಯಾರಾದರೂ ಇದ್ದರೆ, ಅಂಥವರು ಈ ಪ್ರಕಟಣೆ ಕರ್ನಾಟಕ ಗೆಜೆಟ್‌ನಲ್ಲಿ, ಪ್ರಕಟವಾದ 30 ದಿವಸಗಳೊಳಗೆ, ಆಕ್ಷೇಪಣೆಗಳೇನಾದರೂ ಇದ್ದರೆ, ಸಮಂಜಸ ದಾಖಲಾತಿಗಳೊಂದಿಗೆ ಈ ನ್ಯಾಯಾಲಯದ ಮುಂದೆ ಹಾಜರಾಗತಕ್ಕದ್ದು. ಅವಧಿ ಮೀರಿ ಬಂದ ಆಕ್ಷೇಪಣೆ, ತಕರಾರು ಗಮನಿಸಲಾಗುವುದಿಲ್ಲ, ಕಾನೂನು ರೀತ್ಯ, ಪರಿಹಾರಧನವನ್ನು ಅರ್ಜಿದಾರರಿಗೆ ವಿತರಿಸಲಾಗುವುದು.

**ಎಸ್. ವಿಜಯಕುಮಾರ್,**
ಕಾರ್ಮಿಕ ಪರಿಹಾರ ಆಯುಕ್ತರು
ಹಾಗೂ ಕಾರ್ಮಿಕ ಅಧಿಕಾರಿ
ಉಪ ವಿಭಾಗ–1, ಚಿಕ್ಕಮಗಳೂರು.

ಪಿಆರ್–68

## ಸಹಕಾರ ಇಲಾಖೆ

### ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಅಲಿ ಆಸ್ಕರ್ ರಸ್ತೆ, ಬೆಂಗಳೂರು–52

**ವಿಷಯ:** ನಿಷ್ಕ್ರಿಯಗೊಂಡ ಕರ್ನಾಟಕ ರಾಜ್ಯ ಕುಂಬಾರರ ಕೈಗಾರಿಕಾ ಸಹಕಾರಿ ಸಂಘ ಮಂಗಳೂರು ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರ ಪತ್ರದ ಸಂಖ್ಯೆ. ಎ.ಆರ್./36/ಸಮಾಪನೆ/ಎಸ್/8/40/2005–06, ದಿನಾಂಕ:24–02–2011.

2) ಸ.ಸ.ಜಂ.ನಿ. ಮೈಸೂರು ಪ್ರಾಂತ ಮೈಸೂರು ಇವರ ಪತ್ರದ ಸಂಖ್ಯೆ. ಜೆ.ಆರ್.ಎಂ.ಬಿ2. ಡಿ.ಎಲ್.ಎಸ್. 55–05–06, ದಿನಾಂಕ:15–07–2005.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಂಗಳೂರು ಉಪ ವಿಭಾಗ, ಮಂಗಳೂರು ರವರು ಮೈಸೂರು ಪ್ರಾಂತದ ಸಹಕಾರ ಸಂಘಗಳ ಜಂಟಿ ನಿಬಂಧಕರಿಗೆ ಪ್ರಸ್ತಾವೆಯನ್ನು ಸಲ್ಲಿಸಿ, ಕರ್ನಾಟಕ ರಾಜ್ಯ ಕುಂಬಾರರ ಕೈಗಾರಿಕಾ ಸಹಕಾರ ಸಂಘ ನಿಯಮಿತ, ಮಂಗಳೂರು, ಇದರ ನೋಂದಣಿ ಸಂಖ್ಯೆ:21576/24–9–1999 ರಂತೆ ರಾಜ್ಯ ಮಟ್ಟದ ಸಹಕಾರ ಸಂಘವಾಗಿ ನೊಂದಣಿಗೊಂಡು ಹಲವಾರು ವರ್ಷಗಳಿಂದ ಕಾರ್ಯ ನಿರ್ವಹಿಸದೇ, ನಿಷ್ಕ್ರಿಯವಾಗಿದ್ದು ಈ ಸಂಘವನ್ನು ಸಮಾಪನೆಗೊಳಿಸುವಂತೆ ಉಲ್ಲೇಖ (1)ರ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಮೈಸೂರು ಪ್ರಾಂತದ ಸಹಕಾರ ಸಂಘಗಳ ಜಂಟಿ ನಿಬಂಧಕರು, ಈ ಸಂಘವು ನೊಂದಣಿಗೊಂಡ ನಂತರ ಯಾವುದೇ ಕೆಲಸವನ್ನು ನಿರ್ವಹಿಸದೆ ಸ್ಥಗಿತಗೊಂಡಿರುತ್ತದೆಂದು ಮಂಗಳೂರು ಉಪ–ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಿನಾಂಕ:09–06–2005 ರಂದು ಕನ್ನಡಪ್ರಭ ದಿನಪತ್ರಿಕೆ (10–06–2005ರಂದು ಪ್ರಕಟಗೊಂಡಿದೆ)ಯಲ್ಲಿ ಪ್ರಕಟಣೆ ನೀಡಿ ಸದರಿ ಸಂಘವು ಅನೇಕ ವರ್ಷಗಳಿಂದ ಸ್ಥಗಿತಗೊಂಡಿದ್ದು ಅದನ್ನು ಪುನ:ಶ್ಚೇತನಗೊಳಿಸಲು ಆಸಕ್ತಿ ಇದ್ದಲ್ಲಿ 7 ದಿನಗಳಲ್ಲಿ ಕ್ರಮವಿಡಬೇಕೆಂದೂ ಇಲ್ಲದಿದ್ದಲ್ಲಿ ಸಮಾಪನೆ ಮಾಡಲಾಗುವುದೆಂದೂ ತಿಳಿಸಿದಾರೆಂದೂ ಪತ್ರಿಕಾ ಪ್ರಕಟಣೆ ಹೊರಡಿಸಿದ್ದರೂ ಸಹ ಯಾವುದೇ ಸದಸ್ಯರು ಆಸಕ್ತಿ ತೋರಿಸುತ್ತಿಲ್ಲವೆಂದೂ ಉಲ್ಲೇಖ (2)ರ ಪತ್ರದಲ್ಲಿ ವರದಿ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವೆಯನ್ನು ಪರಿಶೀಲಿಸಲಾಗಿ ಈ ಸಂಘವು ನೊಂದಣಿಯಾದಾಗಿನಿಂದಲೂ ಆಡಿಟ್ ಆಗಿಲ್ಲದಿರುವುದು. ಈ ಸಂಘವನ್ನು ಮುನ್ನೆಡಿಸಿಕೊಂಡು ಹೋಗಲು ಸಂಘದ ಸದಸ್ಯರಿಗಾಗಲೀ ಆಡಳಿತ ಸಮಿತಿ ಸದಸ್ಯರಿಗಾಗಲೀ ಯಾವುದೇ ರೀತಿಯ ಆಸಕ್ತಿ ಇಲ್ಲದೇ ಇರುವುದು, ಆಡಳಿತ ಸಮಿತಿ ಸದಸ್ಯರ ವಿವರ ಲಭ್ಯವಿಲ್ಲದೇ ಇರುವುದು ಹಾಗೂ ಇದು ಹಲವಾರು ವರ್ಷಗಳಿಂದ ಸ್ಥಗಿತಗೊಂಡಿರುವುದು ಕಂಡು ಬರುತ್ತದೆ. ಈ ಸಂಘಕ್ಕೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 72(2) (ಬಿ) ಮತ್ತು (2) (ಸಿ) ಅನ್ವಯವಾಗುತ್ತದೆ. ಆದ್ದರಿಂದ ಕರ್ನಾಟಕ ರಾಜ್ಯ ಕುಂಬಾರರ ಕೈಗಾರಿಕಾ ಸಹಕಾರ ಸಂಘ ನಿ., ಮಂಗಳೂರು ಇದನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 72(2) ರಂತೆ ಸಮಾಪನೆಗೊಳಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶ ನೀಡಲಾಗಿದೆ.

**ಆದೇಶ**

**ನಂ.ಸ.ಸ.ನಿ/ಸಮಾಪನೆ/101/2010–11, ದಿನಾಂಕ:31ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿರುವಂತೆ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 72(2) ರಡಿ ದತ್ತವಾದ ಅಧಿಕಾರವನ್ನು ಚಲಾಯಿಸಿ, **ಎಸ್.ಜಿ. ಹೆಗಡೆ ಭಾ.ಆ.ಸೇ. ಸಹಕಾರ ಸಂಘಗಳ ನಿಬಂಧಕರು,** ಆದ ನಾನು ಸ್ಥಗಿತಗೊಂಡಿರುವ ಕರ್ನಾಟಕ ರಾಜ್ಯ, ಕುಂಭಾರರ ಕೈಗಾರಿಕಾ ಸಹಕಾರ ಸಂಘ ನಿಯಮಿತ, ಮಂಗಳೂರು, ಇದನ್ನು ಸಮಾಪನೆಗೊಳಿಸಿ ಪ್ರಕರಣ 73(1)ರಡಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಮಂಗಳೂರು ಉಪ–ವಿಭಾಗದ ಸಹಾಯಕ ನಿಬಂಧಕರನ್ನು ಸಮಾಪಕರನ್ನಾಗಿ ನೇಮಿಸಿರುತ್ತೇನೆ. ಸಮಾಪಕರು ಕೂಡಲೇ ಪ್ರಭಾರ ವಹಿಸಿಕೊಂಡು 30 ದಿನಗಳೊಳಗೆ ಸಂಘದ ವಸ್ತು ಸ್ಥಿತಿಯ ಬಗ್ಗೆ ವರದಿ ಸಲ್ಲಿಸಲು ಹಾಗೂ 90 ದಿನಗಳೊಳಗಾಗಿ ಸಮಾಪನೆ ಪ್ರಕ್ರಿಯೆ ಪೂರ್ಣಗೊಳಿಸಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ದಿನಾಂಕ:31–03–2011ರಂದು ಹೊರಡಿಸಲಾಗಿದೆ.

**ಎಸ್.ಜಿ. ಹೆಗಡೆ,**

ಪಿಆರ್–462 ಸಹಕಾರ ಸಂಘಗಳ ನಿಬಂಧಕರು.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರ ಕಾರ್ಯಾಲಯ, ಕುವೆಂಪು ರಸ್ತೆ, ಕೆನರಾ ಬ್ಯಾಂಕ್ ಎದುರು, ಶಿವಮೊಗ್ಗ

**ವಿಷಯ:** ಹತ್ತಿ ಕೈಮಗ್ಗ ನೇಕಾರರ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ (ನಿ)ಕೋಟೆಗಂಗೂರು ಶಿವಮೊಗ್ಗ ತಾಲ್ಲೂಕು ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗರವರ ಪತ್ರದ ನಂ:ಸನಿಶಿ24/ಸಮಾಪನೆ/ಸಿಆರ್ 13/ 2010–11/ದಿನಾಂಕ:18–12–2010

2) ಈ ಕಛೇರಿಯ ಕಾರಣ ಕೇಳಿ ನೋಟೀಸು ಸಂ:ಡಿಆರ್‌ಎಸ್/ಎಲ್ ಕ್ಯೂಡಿ/ಡಿಎಲ್ ಸ್/ಸಿಆರ್62/2010–11 ದಿನಾಂಕ:31/01/2011

3) ಅಧ್ಯಕ್ಷರು ಹತ್ತಿ ಕೈಮಗ್ಗ ನೇಕಾರರ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ (ನಿ)ಕೋಟೆಗಂಗೂರು ಶಿವಮೊಗ್ಗ ತಾಲ್ಲೂಕು ಇವರ ಪತ್ರ ದಿನಾಂಕ:09/02/2011.

**ಪ್ರಸ್ತಾವನೆ:**

ನಿಷ್ಕ್ರಿಯಗೊಂಡಿರುವ, ಹತ್ತಿ ಕೈಮಗ್ಗ ನೇಕಾರರ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ (ನಿ)ಕೋಟೆಗಂಗೂರು ಶಿವಮೊಗ್ಗ ತಾಲ್ಲೂಕು ಈ ಸಹಕಾರ ಸಂಘವನ್ನು ಸಮಾಪನೆಗೊಳಿಸಲು ಉಲ್ಲೇಖ(1)ರ ಪತ್ರದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಸಂಘವು ನೊಂದಣಿಸಂ:ಸಸಂಸನಿ–24/ಮಾರಾಟ/ನೊಂದಣಿ/7746–1991–92 ದಿನಾಂಕ:02–05–1991 ರಂದು ನೊಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ವ್ಯಾಪ್ತಿಯನ್ನು ಹೊಂದಿರುತ್ತದೆ.

ಸಂಘದ ಉಪನಿಯಮದ ಉದ್ದೇಶಗಳನ್ನು ಕಾರ್ಯರೂಪಕ್ಕೆ ತಂದು ಕಾರ್ಯನಿರ್ವಹಿಸದೇ 1 ವರ್ಷದಿಂದ ಯಾವುದೇ ವ್ಯವಹಾರ ನಿರ್ವಹಿಸದೆ ಸ್ಥಗಿತಗೊಂಡ ಹಿನ್ನಲೆಯಲ್ಲಿ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಈ ಕಚೇರಿಯಿಂದ ಉಲ್ಲೇಖ (2) ರಲ್ಲಿ ಕಾರಣ ಕೇಳಿ ನೋಟೀಸನ್ನು ನೀಡಲಾಗಿತ್ತು. ಸದರಿ ನೋಟೀಸು ಆಡಳಿತ ಮಂಡಳಿ ನಿರ್ದೇಶಕರುಗಳಿಗೆ ದಿನಾಂಕ 07–02–2011 ರಂದು ಜಾರಿಯಾಗಿರುತ್ತದೆ. ಸದರಿ ನೋಟಿಸಿಗೆ ಸಂಘದ ಅಧ್ಯಕ್ಷರು ದಿನಾಂಕ 09–02–2011ರ ಪತ್ರದಲ್ಲಿ ಉತ್ತರಿಸುತ್ತಾ ಸಂಘದಲ್ಲಿ ಕೆಲವು ತಿಂಗಳು ಗಳಿಂದ ಉತ್ಪಾದನೆ ಮಾತ್ರ ಸ್ಥಗಿತವಾಗಿದ್ದು, ಸಮಾಪನೆ ಮಾಡಬಾರದಾಗಿ ಕೋರಿರುತ್ತಾರೆ. ಈ ಬಗ್ಗೆ ಗಮನಿಸಲಾಗಿ ಉಳಿದ ಆಡಳಿತ ಮಂಡಳಿ ಸದಸ್ಯರು ಉತ್ತರವನ್ನು ಸಲ್ಲಿಸಿರುವುದಿಲ್ಲ ಸಂಘವು ಸ್ಥಗಿತವಾಗಿರುವುದಿಲ್ಲ ಎಂಬ ಬಗ್ಗೆ ಆಡಳಿತ ಮಂಡಳಿಯು ದಾಖಲಾತಿಯೊಂದಿಗೆ ಸಮರ್ಥಿಸಿಕೊಳ್ಳಲು ವಿಫಲವಾಗಿರುತ್ತದೆ. ಈ ಸಂಘವನ್ನು ಮುನ್ನೆಡೆಸಿಕೊಂಡು ಹೋಗಲು ಯಾವುದೇ ಸದಸ್ಯರಲ್ಲಿ ಆಸಕ್ತಿ ಇಲ್ಲದೆ ಇರುವುದರಿಂದ ಸಂಘವನ್ನು ಸಮಾಪನೆಗೊಳಿಸಲು ಸೂಕ್ತವೆಂದು ತೀರ್ಮಾನಿಸಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ–ವಿಭಾಗ, ಶಿವಮೊಗ್ಗರವರು ಉಲ್ಲೇಖ(1)ರ ಪತ್ರದಲ್ಲಿ ಸಮಾಪನೆಗೊಳಿಸಲು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸಂ:ಡಿಆರ್ಎಸ್:/ಎಲ್ಕ್ಯೂಡಿ/ಡಿಎಲ್ಎಸ್/ಸಿಆರ್ – 62/2010–11/40, ದಿನಾಂಕ:30ನೇ ಮಾರ್ಚ್ 2011**

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2) ಅನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂ:ಸಿಒ/201/ಸಿಎಲ್ಎಂ 2008 ಬೆಂಗಳೂರು ದಿನಾಂಕ: 27–05–2010 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಶೋಕ ವೆಂ.ಮೊರಬ್ ಕೆ.ಸಿ.ಎಸ್. ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಹತ್ತಿ ಕೈಮಗ್ಗ ನೇಕಾರರ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ (ನಿ) ಕೋಟೆಗಂಗೂರು ಶಿವಮೊಗ್ಗ ತಾಲ್ಲೂಕು ಈ ಸಂಘವನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73(1) ರಂತೆ ಸಹಕಾರ ಸಂಘಗಳ ನಿರೀಕ್ಷಕರು, ಶಿವಮೊಗ್ಗ ತಾಲ್ಲೂಕು ಇವರನ್ನು ಸಮಾಪನೆ ಅಧಿಕಾರಿಯಾಗಿ ನೇಮಕ ಮಾಡಿರುತ್ತೇನೆ.

ಸಮಾಪನಾಧಿಕಾರಿಗಳು ಕೂಡಲೇ ಸಂಘದ ಪ್ರಭಾರವನ್ನು ಪಡೆದು ಸಮಾಪನಾ ಪ್ರಕ್ರಿಯೆಯನ್ನು ಪೂರ್ಣಗೊಳಿಸಿ, ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮೊಹರಿನೊಂದಿಗೆ ದಿನಾಂಕ:30–03–2011ರಂದು ಹೊರಡಿಸಲಾಗಿದೆ.

**ಅಶೋಕ.ವೆಂ.ಮೊರಬ್,**
ಸಹಕಾರ ಸಂಘಗಳ ಉಪ–ನಿಬಂಧಕರು.
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿಆರ್–424

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರು ಶಿವಮೊಗ್ಗ ಜಿಲ್ಲೆ, ಕುವೆಂಪು ರಸ್ತೆ, ಶಿವಮೊಗ್ಗರವರ ಕಾರ್ಯಾಲಯ

**ವಿಷಯ:** ವಿ.ಐ.ಎಸ್.ಎಲ್. ಆಫೀಸರ್ಸ್ ಬಳಕೆದಾರರ ಸಹಕಾರ ಸಂಘ ನಿ. ಭದ್ರಾವತಿ, ಈ ಸಹಕಾರ ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶ ಸಂಖ್ಯೆ ಡಿಆರ್ಎಸ್/ಸಮಾಪನೆ/48/2009–10 ದಿನಾಂಕ:01–02–2010.
2) ಸಮಾಪನಾಧಿಕಾರಿಯವರ ಅಂತಿಮ ಸಭೆ ದಿನಾಂಕ:11–02–2011
3) ಸಮಾಪನಾಧಿಕಾರಿರವರ ಪತ್ರ ಸಂಖ್ಯೆ:ಸಅಅಭ/ಸಮಾಪನೆ/ಎನ್ಟಿಸಿಎಸ್/2010–11 ದಿನಾಂಕ:10–03–2011.

**ಪ್ರಸ್ತಾವನೆ:**

ಸಮಾಪನಾದೇಶಿತ ವಿ.ಐ.ಎಸ್.ಎಲ್. ಆಫೀಸರ್ಸ್ ಬಳಕೆದಾರರ ಸಹಕಾರ ಸಂಘ ನಿ. ಭದ್ರಾವತಿ ಈ ಸಹಕಾರ ಸಂಘವು ಎಆರ್ಎಸ್7896/1973–74 ದಿನಾಂಕ:21–3–1974 ರನ್ವಯ ನೊಂದಣಿಯಾಗಿದ್ದು ಭದ್ರಾವತಿಯ ವಿಐಎಸ್ಎಲ್ ನೌಕರರಿಗೆ ಮಾತ್ರ ಕಾರ್ಯವ್ಯಾಪ್ತಿ ಸೀಮಿತವಾಗಿರುತ್ತದೆ. ಈ ಸಹಕಾರ ಸಂಘವು ನೊಂದಣಿಯಾದ ನಂತರ ಉಪನಿಯಮಗಳ ಉದ್ದೇಶಗಳಿಗನುಗುಣವಾಗಿ ಕಾರ್ಯನಿರ್ವಹಿಸದೇ ಸ್ಥಗಿತಗೊಂಡ ಕಾರಣ ಮತ್ತು ಸಂಘದ ನೊಂದಣಿಯಾಗಿರುವ ಉಪನಿಯಮಗಳ ಉದ್ದೇಶಗಳಿಗನುಗುಣವಾಗಿ ಕಾರ್ಯನಿರ್ವಹಿಸದ ಕಾರಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಶಿವಮೊಗ್ಗ ಇವರ ಶಿಫಾರಸ್ಸಿನ ಮೇರೆಗೆ ಉಲ್ಲೇಖ (1)ರ ಈ ಕಛೇರಿ ಆದೇಶದಲ್ಲಿ ಈ ಸಹಕಾರ ಸಂಘವನ್ನು ಸಮಾಪನೆಗೊಳಿಸಿ ಆದೇಶ ಹೊರಡಿಸಲಾಗಿತ್ತು. ಸಮಾಪನಾಧಿಕಾರಿಯಾಗಿ ನೇಮಿಸಲಾದ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಭದ್ರಾವತಿ ಇವರು ದಿನಾಂಕ 02–02–2010 ರಂದು ಅಧಿಕಾರ ವಹಿಸಿಕೊಂಡು ಸಮಾಪನಾ ಕಾರ್ಯ ಕೈಗೊಂಡಿರುತ್ತಾರೆ.

ಸಮಾಪನಾಧಿಕಾರಿಯವರು ದಿನಾಂಕ 11–02–2011ರಂದು ನಡೆದ ಅಂತಿಮ ಸಭೆ ತೀರ್ಮಾನದಂತೆ ಸಂಘದ ಆಸ್ತಿ ಜವಾಬ್ದಾರಿಯನ್ನು ವಿಲೇವಾರಿ ಮಾಡಿ ಆಸ್ತಿ ಜವಾಬ್ದಾರಿಗಳನ್ನು ಶೂನ್ಯಗೊಳಿಸಿರುವುದರಿಂದ ಕಲಂ 75 ರನ್ವಯ ನೊಂದಣಿ ಸಂಖ್ಯೆಯನ್ನು ರದ್ದುಪಡಿಸುವಂತೆ ಉಲ್ಲೇಖ (3)ರ ಪತ್ರದಲ್ಲಿ ಇವರು ಕೆಲವು ಅಂಶಗಳನ್ನು ಪ್ರಸ್ತಾಪಿಸಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಸರ್ಕಾರದ ಷೇರು ರೂ.5000 ಗಳು ಇದ್ದು ಸದರಿ ಮೊತ್ತವನ್ನು ಸರ್ಕಾರಕ್ಕೆ ಚಲನ್ ನಂ.53 ದಿನಾಂಕ:07–03–2011 ರಂದು ಎಸ್ ಬಿ ಎಂ ಭದ್ರಾವತಿ ಶಾಖೆಯಲ್ಲಿ ಪಾವತಿಸಿರುತ್ತಾರೆ. ಸಮಾಪನಾಧಿಕಾರಿಯವರು ಅಂತಿಮ ಸಭೆಯಲ್ಲಿ ಸಂಘದ ನೊಂದಣಿ ರದ್ಧತಿಗೆ ತೀರ್ಮಾನಿಸಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಂಘದ ಸ್ಥಿರಾಸ್ತಿಗಳು ಇರುವುದಿಲ್ಲ ಮತ್ತು ಚರಾಸ್ತಿಗಳಲ್ಲಿ ಪೀಠೋಪಕರಣಗಳನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗಿದೆ. ಆಸ್ತಿ ಮತ್ತು ಜವಾಬ್ದಾರಿಗಳು ಶೂನ್ಯಗೊಳಿಸಿರುವ ಮೇರೆಗೆ ಸಂಘವನ್ನು ಮುಂದುವರಿಸುವುದರಿಂದ ಸಂಘದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನವಿಲ್ಲದಿರುವುದನ್ನು ಮನಗಂಡು ಈ ಸಹಕಾರ ಸಂಘದ ನೊಂದಣಿ ಸಂಖ್ಯೆಯನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸಂ:ಡಿಆರ್‌ಎಸ್:/ಸಮಾಪನೆ 48/2009–10/42, ದಿನಾಂಕ:19ನೇ ಮಾರ್ಚ್ 2011**

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಪ್ರಕರಣ 75 ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂ:ಸಿಓ201/ಸಿಎಲ್‌ಎಂ 2008 ದಿನಾಂಕ: 27–05–2010 ರನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ, ಸಿ.ಎನ್. ದೇವರಾಜ ಕೆ.ಸಿ.ಎಸ್. ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು **ಸಮಾಪನಾದೇಶಿತ ವಿ.ಐ.ಎಸ್.ಎಲ್.ಆಫೀಸರ್ಸ್ ಬಳಕೆದಾರರ ಸಹಕಾರ ಸಂಘ ನಿ. ಭದ್ರಾವತಿ** ಈ ಸಹಕಾರ ಸಂಘದ ನೊಂದಣಿ ಸಂಖ್ಯೆ ಎಆರ್‌ಎಸ್7896/1973–74 ದಿನಾಂಕ:21–3–1974 ನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ. ಈ ಆದೇಶದ ದಿನಾಂಕದಿಂದ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡು ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ಸಂಬಂಧಿಸಿದ ದಾಖಲಾತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33 ರನ್ವಯ ಮೂರು ವರ್ಷಗಳ ಕಾಲ ಸಹಕಾರ ಸಂಘವು ಸಹಾಯಕ ನಿಬಂಧಕರು ಶಿವಮೊಗ್ಗ ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ 19ನೇ ಮಾರ್ಚ್ 2011 ರಂದು ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಹೊರಡಿಸಲಾಗಿದೆ.

ಸಹಕಾರ ಸಂಘಗಳ ಉಪ–ನಿಬಂಧಕರು.
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿಆರ್–425

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಆಲಿ ಆಸ್ಕರ್ ರಸ್ತೆ, ಬೆಂಗಳೂರು–560052**

**ವಿಷಯ:** ಸ್ಥಗಿತಗೊಂಡಿರುವ ದಕ್ಷಿಣ ಕನ್ನಡ ಜಿಲ್ಲಾ ಗುಡಿ ಕೈಗಾರಿಕೆ ಸಹಕಾರಿ ಸಂಘ ನಿ., ಮಂಗಳೂರು ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಮೈಸೂರು ಪ್ರಾಂತದ ಸಹಕಾರ ಸಂಘಗಳ ಜಂಟಿ ನಿಬಂಧಕರ ಪತ್ರ ಸಂಖ್ಯೆ:ಜೆಆರ್‌ಎಂ:ಬಿ 2:ಡಿಎಲ್‌ಎನ್:58: 2005–06 ದಿನಾಂಕ:27–07–2007.

2) ಮಂಗಳೂರು ಉಪ ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಪತ್ರ ಸಂಖ್ಯೆ:ಎಆರ್ 36:ಎಸ್5:8: ಎಲ್‌ಕ್ಯೂಡಿ:1999–2000 ದಿನಾಂಕ:24–02–2011.

**ಪ್ರಸ್ತಾವನೆ:**

ಮೈಸೂರು ಪ್ರಾಂತದ ಸಹಕಾರ ಸಂಘಗಳ ಜಂಟಿ ನಿಬಂಧಕರು, ಉಲ್ಲೇಖ(1)ರ ಪತ್ರದ ಮೂಲಕ ಸ್ಥಗಿತಗೊಂಡಿರುವ ದಕ್ಷಿಣ ಕನ್ನಡ ಜಿಲ್ಲಾ ಗುಡಿ ಕೈಗಾರಿಕಾ ಸಹಕಾರ ಸಂಘ ನಿ., ಮಂಗಳೂರು ಇದನ್ನು ಸಮಾಪನೆಗೊಳಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಮಂಗಳೂರು ಉಪ ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಪ್ರಕಾರ ದಿನಾಂಕ:9–06–2005 ರ ಕನ್ನಡಪ್ರಭ ದಿನಪತ್ರಿಕೆಯಲ್ಲಿ ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಪ್ರಕಟಣೆ ನೀಡಲಾಗಿದ್ದು, ಇದುವರೆವಿಗೂ ಯಾವುದೇ ಪ್ರತಿಕ್ರಿಯೆ ಲಭ್ಯವಾಗಿಲ್ಲದಿರುವುದನ್ನು ಗಮನಿಸಿದರೆ ಸಂಘದ ಅಸ್ತಿತ್ವದ ಬಗ್ಗೆ ಯಾವುದೇ ಸದಸ್ಯರಿಗೆ, ಆಡಳಿತ ಸಮಿತಿ ಸದಸ್ಯರಿಗೆ ಮತ್ತು ಸಾರ್ವಜನಿಕರಿಗೆ ಆಸಕ್ತಿ ಇಲ್ಲದಿರುವುದು ಸ್ಪಷ್ಟವಾಗುತ್ತದೆ. ಸದರಿ ಪ್ರಸ್ತಾವವನ್ನು ಪರಿಶೀಲಿಸಲಾಗಿ ಸಂಘವು ಹಲವಾರು ವರ್ಷಗಳಿಂದ ಕಾರ್ಯನಿರ್ವಹಿಸದೇ ಸ್ಥಗಿತವಾಗಿರುವುದು, ತನ್ನ ಬೈಲಾ ಪ್ರಕಾರ ಉದ್ದೇಶಗಳ ಸಾಧನೆಗೆ ಕ್ರಮವಿಡದಿರುವುದು, ಆಡಳಿತ ಸಮಿತಿಯ ಸದಸ್ಯರ ವಿಳಾಸಗಳು ಪತ್ತೆಯಾಗದಿರುವುದು, ವಾರ್ಷಿಕ ಮಹಾಸಭೆ/ಆಡಳಿತ ಸಮಿತಿ ಸಭೆಗಳನ್ನು ನಡೆಸದಿರುವುದು, ಆಡಳಿತ ಸಮಿತಿಗೆ ಚುನಾವಣೆ ನಡೆಸದಿರುವುದು, ಮುಖ್ಯ ಕಾರ್ಯನಿರ್ವಾಹಕನನ್ನು ನೇಮಿಸಿ ಲೆಕ್ಕಪತ್ರ ನಿರ್ವಹಣೆಗೆ ವ್ಯವಸ್ಥೆ ಮಾಡದಿರುವುದು, ಲೆಕ್ಕಪತ್ರಗಳನ್ನು ಆಡಿಟ್ ಮಾಡಿಸದಿರುವುದು ಇತ್ಯಾದಿ ನೋಂದಣಿ ಮತ್ತು ವ್ಯವಸ್ಥಾಪನೆಗೆ ಸಂಬಂಧಪಟ್ಟ ನಿಬಂಧನೆಗಳನ್ನು ಪಾಲಿಸದಿರುವುದು ಕಂಡು ಬರುತ್ತದೆ. ಇದರಿಂದ ಪ್ರಕರಣ 72(2)(ಬಿ) ಮತ್ತು (2)(ಸಿ) ಅನ್ವಯವಾಗುವುದು ಸ್ಪಷ್ಟವಾಗುತ್ತದೆ.

ಮೇಲಿನ ಪರಿಸ್ಥಿತಿಯಲ್ಲಿ ಈ ಸಂಘವನ್ನು ಪ್ರಕರಣ 72ರನ್ವಯ ಸಮಾಪನೆಗೊಳಿಸುವುದು ಅಗತ್ಯವೆಂದು ಅಭಿಪ್ರಾಯಪಟ್ಟ ಈ ಕೆಳಗಿನ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ಸಂ:ಸಸಂನಿ:ಎಲ್‌ಕ್ಯೂಡಿ:102:2010–11, ದಿನಾಂಕ:30ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ವಯ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 72(2) ರಡಿ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ:139:ಸಿಎಲ್‌ಎಂ:2010 ದಿನಾಂಕ:17–02–2011ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಆರ್.ಎಸ್. ಹುಚ್ಚಾಚಾರಿ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಹೈನುಗಾರಿಕೆ) ಆದ ನಾನು ಸ್ಥಗಿತಗೊಂಡಿರುವ ದಕ್ಷಿಣ ಕನ್ನಡ ಜಿಲ್ಲಾ ಗುಡಿ ಕೈಗಾರಿಕಾ ಸಹಕಾರ ಸಂಘ ನಿ., ಮಂಗಳೂರು ಇದನ್ನು ಸಮಾಪನೆಗೊಳಿಸಿ ಪ್ರಕರಣ 73(1)ರಡಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಮಂಗಳೂರು ಉಪ ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿಯ ಅಧೀಕ್ಷಕರನ್ನು ಸಮಾಪಕರನ್ನಾಗಿ ನೇಮಿಸುತ್ತೇನೆ. ಸಮಾಪಕರು ಕೂಡಲೇ ಪ್ರಭಾರ ವಹಿಸಿಕೊಂಡು 30 ದಿನಗಳೊಳಗಾಗಿ ಸಂಘದ ವಸ್ತುಸ್ಥಿತಿಯ ಬಗ್ಗೆ ವರದಿ ಸಲ್ಲಿಸುವಂತೆ ಹಾಗೂ 90 ದಿನಗಳೊಳಗೆ ಸಮಾಪನಾ ಪ್ರಕ್ರಿಯೆ ಪೂರ್ಣಗೊಳಿಸಿ ನೋಂದಣಿ ರದ್ಧತಿಗೆ ಪ್ರಸ್ತಾವೆ ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ದಿನಾಂಕ:30–03–2011ರಂದು ಹೊರಡಿಸಲಾಗಿದೆ.

**ಆರ್.ಎಸ್. ಹುಚ್ಚಾಚಾರಿ,**
ಸಹಕಾರ ಸಂಘಗಳ ಅಪರ ನಿಬಂಧಕರು.
(ಕೈಗಾರಿಕೆ ಮತ್ತು ಹೈನುಗಾರಿಕೆ)

ಪಿಆರ್–409

**ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು–52 ರವರ ನಡವಳಿಗಳು**

**ವಿಷಯ:** ಸಮಾಪನೆಯಲ್ಲಿರುವ ದಕ್ಷಿಣ ಕನ್ನಡ ಜಿಲ್ಲಾ ವೇರ್‌ಹೌಸ್ ಗೋಡೌನ್ ಸಹಕಾರ ಸಂಘ ನಿ., ಮಂಗಳೂರು ಇದರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಾಪನಾ ಆದೇಶದ ಸಂ:ಆರ್‌ಸಿಎಸ್/ಎಲ್‌ಕ್ಯೂಡಿ/76/05–06 ದಿನಾಂಕ:17–9–05.
2) ಸಮಾಪನಾಧಿಕಾರಿಗಳ ಬದಲಾವಣೆ ಆದೇಶದ ಸಮಸಂಖ್ಯೆ ದಿನಾಂಕ:22–12–05
3) ಸ.ಸಂ.ಉಪನಿಬಂಧಕರು, ದಕ್ಷಿಣ ಕನ್ನಡ ಜಿಲ್ಲೆ ಇವರ ಪತ್ರ ಸಂ:ಡಿಆರ್‌ಪಿಎಸ್/9/ಸಮಾಪನೆ/2009–10 ದಿನಾಂಕ:27–5–10 ಹಾಗೂ 2–12–2010

**ಪ್ರಸ್ತಾವನೆ:**

ದಕ್ಷಿಣ ಕನ್ನಡ ಜಿಲ್ಲಾ ವೇರ್‌ಹೌಸ್ ಗೋಡೌನ್ ಸಹಕಾರ ಸಂಘ ನಿ., ಮಂಗಳೂರು ಈ ಸಂಘವು ನೋಂದಣಿ ಸಂ: 125 ದಿನಾಂಕ:4–8–1963 ರಲ್ಲಿ ನೋಂದಣಿಯಾಗಿದ್ದು, ಇದರ ಕಾರ್ಯವ್ಯಾಪ್ತಿಯು ಜಿಲ್ಲಾ ಮಟ್ಟದ್ದಾಗಿರುತ್ತದೆ. ಉಲ್ಲೇಖ (1)ರ ಆದೇಶದಂತೆ ಸಮಾಪನೆಗೊಳಿಸಿ, ಸಮಾಪನಾಧಿಕಾರಿಯನ್ನು ನೇಮಿಸಿದ್ದು, ಉಲ್ಲೇಖ (2)ರ ರೀತ್ಯಾ ಸಮಾಪನಾಧಿಕಾರಿಯವರನ್ನು ಬದಲಾಯಿಸಿ ಆದೇಶಿಸಿ ಮಾರಾಟಾಧಿಕಾರಿ – 2, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಮಂಗಳೂರು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಅದರಂತೆ ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು ದಿನಾಂಕ:30–12–05 ರಂದು ಸ್ವಯಂ ಆಗಿ ವಹಿಸಿಕೊಂಡು, ಸಮಾಪನಾ ನಡವಳಿಕೆಗಳನ್ನು ಕೈಗೊಂಡಿದ್ದು, ಸಂಘವು ಅನೇಕ ವರ್ಷಗಳ ಹಿಂದೆಯೇ ಸ್ಥಗಿತಗೊಂಡಿದ್ದು, 1973–74 ರಿಂದಲೂ ಲೆಕ್ಕಪರಿಶೋಧನೆ ಆಗದಿರುವ ಬಗ್ಗೆ ಆಡಿಟ್ ಇಲಾಖೆಯ ಪ್ರಕಟಣೆ ದಿನಾಂಕ:5–3–1997 ಸಾಬೀತುಪಡಿಸಿದ್ದು, ಹಾಗೂ ಈ ಸಂಘದ ಹಿಂದಿನ ಯಾವುದೇ ವರ್ಷಗಳ ಆಡಿಟ್ ವರದಿಯು ಉಪನಿರ್ದೇಶಕರ ಕಛೇರಿಯಲ್ಲಿ ಲಭ್ಯವಿಲ್ಲವೆಂದು ಹಾಗೂ ಸದರಿ ಸಂಘದಿಂದ ಸರ್ಕಾರಕ್ಕೆ ಯಾವುದೇ ಸಾಲ, ಷೇರು ಬಾಕಿ ಇರುವುದಿಲ್ಲವೆಂದು ಸಮಾಪನಾಧಿಕಾರಿಯವರು ತಿಳಿಸಿರುತ್ತಾರೆ. ದಿನಾಂಕ:25–11–07 ರಂದು ವಿಜಯ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಣೆಯೊಂದನ್ನು ಹೊರಡಿಸಿ ಸಂಘದ ದಾಖಲಾತಿಗಳು ಮತ್ತು ಸಂಘದ ಅಸ್ತಿತ್ವದ ಬಗ್ಗೆ ತಿಳುವಳಿಕೆ ಇದ್ದವರು ಸದರಿಯವರನ್ನು ಸಂಪರ್ಕಿಸಲು ಇಲ್ಲದಿದ್ದಲ್ಲಿ ಸಂಘದ ನೋಂದಣಿ ರದ್ಧತಿಗೆ ಶಿಫಾರಸ್ಸು ಮಾಡಲಾಗುವುದೆಂದು ಪ್ರಕಟಣೆಯನ್ನು ನೀಡಲಾಗಿದ್ದರೂ ಸಹ ಇದಕ್ಕೆ ಯಾವುದೇ ಪ್ರತಿಕ್ರಿಯೆ ಇಲ್ಲದಿದ್ದರಿಂದ ಸದರಿ ಸಂಘವು ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ, ಇಲ್ಲಿ ಉಳಿತಾಯ ಖಾತೆಯಲ್ಲಿ ಇದ್ದ ರೂ.40,000/– ಗಳನ್ನು ಸಹಕಾರ ಅಭಿವೃದ್ಧಿ ನಿಧಿ ಖಾತೆಗೆ ಸಂಖ್ಯೆ 9368 ಅಪೆಕ್ಸ್ ಬ್ಯಾಂಕ್ ಇಲ್ಲಿಗೆ ಡಿ.ಡಿ. ಸಂಖ್ಯೆ 479272 ದಿನಾಂಕ:3–7–09 ರನ್ವಯ ಜಮೆ ಮಾಡಿರುತ್ತಾರೆ.

ದಿನಾಂಕ:4–7–07 ರಂದು ಸಮಾಪನಾಧಿಕಾರಿಯವರು ಸಭೆ ಕರೆದಿದ್ದು ಆಸ್ತಿ–ಜವಾಬ್ದಾರಿಗಳನ್ನು ಶೂನ್ಯಗೊಳಿಸಲು ಮತ್ತು ನೋಂದಣಿ ರದ್ಧತಿಗೆ ಪ್ರಸ್ತಾವೆ ಸಲ್ಲಿಸಲು ತೀರ್ಮಾನಿಸಿ, ಅದರಂತೆ ದಿನಾಂಕ:3–7–09 ಕ್ಕೆ ಇದ್ದಂತೆ ಆಸ್ತಿ–ಜವಾಬ್ದಾರಿ ತ:ಖ್ತೆ ಶೂನ್ಯಗೊಳಿಸಿ, ಸಹಾಯಕ ನಿಬಂಧಕರು, ಮಂಗಳೂರು ಇವರ ಮೂಲಕ ನೋಂದಣಿ ಸಂಖ್ಯೆ ರದ್ಧತಿಗೆ ಪ್ರಸ್ತಾವೆ ಸಲ್ಲಿಸಿರುತ್ತಾರೆ. ಸಹಾಯಕ ನಿಬಂಧಕರು, ಮಂಗಳೂರು ಇವರು ಸದರಿ ಸಂಘವು ಸಮಾಪನಾವಸ್ಥೆಯಲ್ಲಿ ಮುಂದುವರಿಯುವುದರಿಂದ ಸದಸ್ಯರಿಗಾಗಲೀ ಅಥವಾ ಸಾರ್ವಜನಿಕರಿಗಾಗಲಿ ಯಾವುದೇ ಪ್ರಯೋಜನ ಇಲ್ಲವೆಂದು ಸದರಿ ಪ್ರಸ್ತಾವೆಗೆ ಶಿಫಾರಸ್ಸು ಮಾಡಿರುವುದನ್ನು ಉಪನಿಬಂಧಕರು ಉಲ್ಲೇಖ (3) ರ ಪತ್ರದಲ್ಲಿ ಸದರಿ ಶಿಫಾರಸ್ಸನ್ನು ಒಪ್ಪಬಹುದಾಗಿದೆಂದು ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಪರಿಗಣಿಸಿ ಸಂಘವನ್ನು ಯಥಾಸ್ಥಿತಿಯಲ್ಲಿ ಮುಂದುವರೆಸುವುದರಿಂದ ಸಾರ್ವಜನಿಕರಿಗಾಗಲೀ ಅಥವಾ ಸದಸ್ಯರಿಗಾಗಲೀ ಯಾವುದೇ ಪ್ರಯೋಜನಕಾರಿಯಾಗಿಲ್ಲವೆಂದು ಮನಗಂಡು ಸದರಿ ಸಮಾಪನಾ ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸಮಂಜಸವೆಂದು ಪರಿಭಾವಿಸಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

## ಆದೇಶ

**ಸಂ.ಆರ್‌ಸಿಎಸ್/ಎಲ್‌ಕ್ಯೂಡಿ/77/05–06, ದಿನಾಂಕ:28ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿರುವಂತೆ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಕೆ.ಹೆಚ್. ತಿಮ್ಮಯ್ಯ, ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರಂತೆ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಓ/139/ಸಿಎಲ್ಎಂ/2010 ಬೆಂಗಳೂರು ದಿನಾಂಕ:17–2–2011 ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ. ದಕ್ಷಿಣ ಕನ್ನಡ ಜಿಲ್ಲಾ ವೇರ್‌ಹೌಸ್ ಗೋಡೌನ್ ಸಹಕಾರ ಸಂಘ ನಿ, ಮಂಗಳೂರು ಇದರ ನೋಂದಣಿ ಸಂ:125 ದಿನಾಂಕ:4–8–1963 ನ್ನು ನೋಂದಣಿ ರದ್ದುಪಡಿಸಿರುತ್ತೇನೆ. ಈ ನೋಂದಣಿ ರದ್ಧತಿಯು ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ಸಂಪೂರ್ಣವಾಗಿ ನಿಂತುಹೋಗಿರುತ್ತದೆಂದು ಸಂಘವು ಅಸ್ತಿತ್ವದಲ್ಲಿಲ್ಲದೆ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು.

ಸಂಘದ ನೋಂದಣಿ ಪತ್ರ ಹಾಗೂ ದಾಖಲಾತಿಗಳನ್ನು ಸಹಾಯಕ ನಿಬಂಧಕರು, ಮಂಗಳೂರು ಇವರ ಕಛೇರಿಗೆ ಸ್ವೀಕೃತಿ ಪಡೆಯತಕ್ಕದ್ದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಹಾಗೂ ಕಛೇರಿ ಮೊಹರಿನೊಂದಿಗೆ ದಿನಾಂಕ:28–03–2011ರಂದು ಹೊರಡಿಸಲಾಗಿದೆ.

**ಕೆ.ಹೆಚ್. ತಿಮ್ಮಯ್ಯ,**
ಸಹಕಾರ ಸಂಘಗಳ ಅಪರ ನಿಬಂಧಕರು.
(ಬಳಕೆ ಮತ್ತು ಮಾರಾಟ)

ಪಿಆರ್–410

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪ ವಿಭಾಗ ಮಧುಗಿರಿ ಇವರ ಕಾರ್ಯಾಲಯದ ಕಾರ್ಯವಾಹಿಗಳು

**ವಿಷಯ:** ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ. ತೋವಿನಕೆರೆ, ಕೊರಟಗೆರೆ ತಾಲ್ಲೂಕು ಇದರ ಮಾಜಿ ಕಾರ್ಯದರ್ಶಿ ಶ್ರೀ ಮಲ್ಲಪ್ಪ, ಇವರ ಸ್ಥಿರಾಸ್ತಿಗಳನ್ನು ಸಂಘದ ಹೆಸರಿಗೆ ವರ್ಗಾವಣೆ ಮಾಡಿದ್ದ ಸ್ಥಿರಾಸ್ಥಿಗಳನ್ನು, ಅವರ ಹೆಸರಿಗೆ ಮರುವರ್ಗಾವಣೆ ಮಾಡುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಆದೇಶ ಪತ್ರದ ಸಂಸ.ಸಂ.ಸ.ನಿ/33/ಎಬಿಎನ್/ಇ.ಎಕ್ಸ್.ಎನ್./ಇಡಿ/ಎಸ್.ಸಿ/140/2001–02 ದಿನಾಂಕ 18–02–02.

2) ವ್ಯವಸ್ಥಾಪಕರು ಪ್ರಾಥಮಿಕ ಕೃಷಿಪತ್ತಿನ ಸಹಕಾರ ಸಂಘ ನಿ. ತೋವಿನಕೆರೆ, ಕೊರಟಗೆರೆ ತಾಲ್ಲೋಕು ಇವರ ಪತ್ರ ದಿನಾಂಕ 2–11–2006 ಮತ್ತು 24–07–2007.

3) ಈ ಕಛೇರಿ ಆದೇಶ ಪತ್ರದ ಸಂ./ಸ.ನಿ/33/ಎಬಿಎನ್/ಇ.ಎಕ್ಸ್.ಎನ್./ಪಿ.ಎಂ.ಸಿ/39/2007–08 ದಿನಾಂಕ:31–07–07.

4) ವ್ಯವಸ್ಥಾಪಕರು ಪ್ರಾಥಮಿಕ ಕೃಷಿಪತ್ತಿನ ಸಹಕಾರ ಸಂಘ (ನಿ) ತೋವಿನಕೆರೆ ಕೊರಟಗೆರೆ ತಾಲ್ಲೂಕು ಇವರ ಪತ್ರ ದಿನಾಂಕ 4–2–10 ಮತ್ತು 26–02–2011

5) ಸಹಕಾರ ಅಭಿವೃದ್ಧಿ ಅಧಿಕಾರಿ, ಕೊರಟಗೆರೆ ತಾಲ್ಲೋಕು ಇವರ ಪತ್ರದ ಸಂ/ಸ.ಅ.ಅ.ಕೊ/ವಿ.ಎಸ್.ಎಸ್.ಬಿ.ಎನ್. ತೋವಿನಕೆರೆ/52/2010–11, ದಿನಾಂಕ 26–07–2010.

**ಪ್ರಸ್ತಾವನೆ:**

ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿಯಮಿತ, ತೋವಿನಕೆರೆ, ಕೊರಟಗೆರೆ ತಾಲ್ಲೋಕು, ಇವರಲ್ಲಿ ಶ್ರೀ ಮಲ್ಲಪ್ಪ ಇವರು ಕಾರ್ಯದರ್ಶಿಯಾಗಿದ್ದ ಅವಧಿಯಲ್ಲಿ ಸಂಘದ ಹಣ ದುರುಪಯೋಗ ಪಡಿಸಿಕೊಂಡಿದ್ದ ಹಿನ್ನೆಲೆಯಲ್ಲಿ ಸಂಘದಿಂದ ದಾವ, ಡಿಕ್ರಿ ಅಮಲ್ಜಾರಿ ನಡೆದು ಅವರಿಗೆ ಸೇರಿದ ಈ ಕೆಳಕಂಡ ಸ್ವತ್ತುಗಳನ್ನು ಈ ಕಛೇರಿಯ ಉಲ್ಲೇಖ (1)ರ ಆದೇಶ ಪತ್ರದಲ್ಲಿ ಸಂಘದ ಹೆಸರಿಗೆ ಸ್ಥಿರೀಕರಿಸಿ ವರ್ಗಾವಣೆಗೆ ಆದೇಶ ಮಾಡಿರುತ್ತದೆ.

**ವರ್ಗಾವಣೆಗೆ ಆಗಿರುವ ಸ್ಥಿರಸ್ವತ್ತುಗಳು**

| ಸರ್ವೆ ನಂ ಮನೆ ನಂ | ಗ್ರಾಮ/ಹೋಬಳಿ ತಾಲ್ಲೋಕು | ವಿಸ್ತೀರ್ಣ ತರಹೆ | ಚಕ್ಕುಬಂದಿ |
|---|---|---|---|
| 69/1 | ಎಸ್.ಎಂ. ಗೊಲ್ಲಹಳ್ಳಿ ದೊಡ್ಡೇರಿ ಹೋಬಳಿ ಮಧುಗಿರಿ ತಾಲ್ಲೋಕು | 1) 46 x 60 ಅಡಿಗಳು<br>2) 10 x 40 ಅಡಿಗಳು<br>(3160 ಅಡಿಗಳು)<br>ನಿವೇಶನಗಳು | ಪೂರ್ವಕ್ಕೆ – ಜಯಲಕ್ಷ್ಮಮ್ಮನವರ ಜಮೀನು<br>ಪಶ್ಚಿಮಕ್ಕೆ – ಟಿ. ರಾಮಣ್ಣನವರ ನಿವೇಶನ ಮತ್ತು ಆರ್.ಸಿ.ಸಿ. ಕಟ್ಟಡ<br>ಉತ್ತರಕ್ಕೆ – ಮಧುಗಿರಿ ಶಿರಾ ರಸ್ತೆ<br>ದಕ್ಷಿಣಕ್ಕೆ – ಜಯಲಕ್ಷ್ಮಮ್ಮನವರ ಜಮೀನು |
| 87 | ಎಸ್.ಎಂ. ಗೊಲ್ಲಹಳ್ಳಿ ದೊಡ್ಡೇರಿ ಹೋಬಳಿ ಮಧುಗಿರಿ ತಾಲ್ಲೋಕು | ವಾಸದ ಮನೆ | ಪೂರ್ವಕ್ಕೆ – ಸರ್ಕಾರಿ ದಾರಿ<br>ಪಶ್ಚಿಮಕ್ಕೆ – ಸಣ್ಣರಂಗಪ್ಪನ ಜಮೀನು<br>ಉತ್ತರಕ್ಕೆ – ಪಾಠಶಾಲೆ, ಮತ್ತು ಸರ್ಕಾರಿ ಜಮೀನು<br>ದಕ್ಷಿಣಕ್ಕೆ – ಹುಸೇನಾಬಿ ಮನೆ |

| | | | |
|---|---|---|---|
| 62 | ಎಸ್.ಎಂ. ಗೊಲ್ಲಹಳ್ಳಿ ದೊಡ್ಡೇರಿ ಹೋಬಳಿ ಮಧುಗಿರಿ ತಾಲ್ಲೋಕು | 5.18ಎ–ಖುಷ್ಕಿ | ಪೂರ್ವಕ್ಕೆ – ಕೈಮರ–ತೋವಿನ ಕೆರೆ ರಸ್ತೆ<br>ಪಶ್ಚಿಮಕ್ಕೆ – ತಿಮ್ಮಯ್ಯನ ಜಮೀನು<br>ಉತ್ತರಕ್ಕೆ – ಸಣ್ಣನರಸಿಂಹಯ್ಯನ ಜಮೀನು<br>ದಕ್ಷಿಣಕ್ಕೆ – ರಾಮಕ್ಕನ ಜಮೀನು |

ಪ್ರಾಥಮಿಕ ಕೃಷಿಪತ್ತಿನ ಸಹಕಾರ ಸಂಘ ನಿ., ತೋವಿನಕೆರೆ ಇದರ ವ್ಯವಸ್ಥಾಪಕರು ಮತ್ತು ಸಹಕಾರ ಅಭಿವೃದ್ಧಿ ಅಧಿಕಾರಿಗಳು ಉಲ್ಲೇಖ (4) ಮತ್ತು (5) ರಲ್ಲಿ ಪ್ರಸ್ತಾವೆ ಸಲ್ಲಿಸಿ ಇದೇ ಸಂಘದ ಮಾಜಿ ಕಾರ್ಯದರ್ಶಿ ಶ್ರೀ ಮಲ್ಲಪ್ಪನವರು, ಸಂಘಕ್ಕೆ ಬರಬೇಕಾಗಿದ್ದ ಬಾಕಿ ಎಲ್ಲವನ್ನು ಬಡ್ಡಿಯೊಂದಿಗೆ ಪಾವ್ತಿಸಿದ್ದು, ಸಂಘದ ಹೆಸರಿಗೆ ವರ್ಗಾವಣೆ ಮಾಡಿಕೊಂಡಿರುವ ಮೇಲ್ಕಂಡ ಎಲ್ಲಾ ಸ್ಥಿರ ಸ್ವತ್ತುಗಳನ್ನು ವರ್ಗಾವಣೆ ಮಾಡಿಕೊಡಲು ಸದರಿ ಸಂಘದ ಆಡಳಿತ ಮಂಡಳಿ ಠರಾವಿನೊಂದಿಗೆ ಸಲ್ಲಿಸಿ ಕೋರಿರುತ್ತಾರೆ. ಸಂಘದ ಮಾಜಿ ವ್ಯವಸ್ಥಾಪಕರಾದ ಶ್ರೀ ಮಲ್ಲಪ್ಪನವರು ಸಂಘಕ್ಕೆ ಪಾವ್ತಿಸಿರುವ ಹಣದ ವಿವರಗಳನ್ನು ಈ ಕೆಳಗೆ ನಮೂದು ಮಾಡಿದೆ.

| ಕ್ರ.ಸಂ. | ವಿವರ (ರೆ.ನಂ/ದಿನಾಂಕ) | ಮೊಬಲಗು |
|---|---|---|
| 1 | ರ.ನಂ. 1227/31–1–2010 | ರೂ. 2,40,000–00 |
| 2 | ರ.ನಂ. 1229/16–1–2010 | ರೂ. 98,203–00 |
| 3 | ರ.ನಂ. 760/17–07–2010 | ರೂ. 3,50,000–00 |
| | ಒಟ್ಟು | ರೂ. 6,88,203–00 |

ಪ್ರಕರಣವನ್ನು ಪರಿಶೀಲಿಸಿದೆ ಸಂಘದ ಆಡಳಿತ ಮಂಡಳಿ ಸಂಘದ ಮಾಜಿ ಕಾರ್ಯದರ್ಶಿ ಶ್ರೀ ಮಲ್ಲಪ್ಪನವರು ಸಂಘದ ಪೂರಾ ಬಾಕಿ ಹಣವನ್ನು ಬೇಬಾಕಿ ಮಾಡಿರುವ ಕುರಿತು ಸಭೆಯಲ್ಲಿ ಚರ್ಚಿಸಿ, ಸಂಘದ ಹೆಸರಿಗೆ ವರ್ಗಾವಣೆಯಾಗಿರುವ ಅವರ ಸ್ಥಿರ ಸ್ವತ್ತುಗಳನ್ನು ಅವರ ಹೆಸರಿಗೆ ಮರು ವರ್ಗಾವಣೆ ಮಾಡಿಕೊಟ್ಟು ಪ್ರಕರಣವನ್ನು ಖೈದುಗೊಳಿಸಲು ಕೋರಿರುವುದನ್ನು ಪರಿಗಣಿಸಿ, ಉಲ್ಲೇಖ (1)ರ ಆದೇಶವನ್ನು ರದ್ದುಪಡಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

## ಆದೇಶ

**ನಂಸನಿ 33/ABN/ಹ.ದು.ಅ.ಬಡ್ಡಿಮನ್ನಾ/19/2009–10, ದಿನಾಂಕ:28ನೇ ಫೆಬ್ರವರಿ 2011**

ಶ್ರೀ ಹೆಚ್.ಡಿ. ಶಿವಣ್ಣ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು ಮಧುಗಿರಿ ಉಪವಿಭಾಗ ಮಧುಗಿರಿ ಆದ ನಾನು ಕರ್ನಾಟಕ ರಾಜ್ಯ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38 ಎ(15) ರನ್ವಯ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿ201/CLM/2008 ಬೆಂಗಳೂರು ದಿನಾಂಕ 27–5–2010 ರೀತ್ಯಾ ಪ್ರತ್ಯಾಯೋಜಿಸಲ್ಪಟ್ಟ ಅಧಿಕಾರವನ್ನು ಉಪಯೋಗಿಸಿ ವ್ಯವಸಾಯ ಸೇವಾ ಸಹಕಾರ ಸಂಘ ನಿ., ತೋವಿನಕೆರೆ, ಕೊರಟಗೆರೆ ತಾಲ್ಲೋಕು ಇದರ ಹೆಸರಿನಲ್ಲಿ ಪ್ರಸ್ತಾವೆಯಲ್ಲಿ ಕಾಣಿಸಿರುವ ವರ್ಗಾಹಿಸಿರುವ ಷೆಡ್ಯೂಲ್ ಸ್ಥಿರಾಸ್ಥಿಗಳನ್ನು ಶ್ರೀ ಮಲ್ಲಪ್ಪ ಇವರ ಹೆಸರಿಗೆ ನಿಲ್ಲಿಸಿ ಈ ವರ್ಗಾವಣೆ ಆದೇಶ ನೀಡಿರುತ್ತೇನೆ.

ಸಹಕಾರ ಸಂಘಗಳ ಕಾಯ್ದೆ ಅನ್ವಯ ನಮೂನೆ–8ರ ನಿಗದಿತ ನಮೂನೆಯಲ್ಲಿ ಸ್ಥಿರ ಸ್ವತ್ತುಗಳ ವರ್ಗಾವಣೆ ಪತ್ರವನ್ನು ಅಲಾಯಿದ ನೀಡಲಾಗಿರುವುದನ್ನು ಈ ಆದೇಶಕ್ಕೆ ಲಗತ್ತಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ದಿನಾಂಕ:28–02–2011ರಂದು ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು.
ಮಧುಗಿರಿ ಉಪವಿಭಾಗ, ಮಧುಗಿರಿ.

## "ನಮೂನೆ – 08"

**ಕರ್ನಾಟಕ ಸಹಕಾರ ಸಂಘಗಳ ನಿಯಮ 1960: 38ಎ (15)ರ ರೀತ್ಯಾ**

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101ರ ಅನ್ವಯ ಬಾಕಿಯ ಬಗ್ಗೆ**

ತುಮಕೂರು ಜಿಲ್ಲೆ ಕೊರಟಗೆರೆ ತಾಲ್ಲೋಕು ಎಸ್.ಎಂ. ಗೊಲ್ಲಹಳ್ಳಿ, ದೊಡ್ಡೇರಿ ಹೋಬಳಿ ಗ್ರಾಮದ ವಾಸಿ, ಶ್ರೀ ಮಲ್ಲಪ್ಪ ಇವರ ಹೆಸರಿನಲ್ಲಿದ್ದ ಸ್ಥಿರಾಸ್ತಿಗಳನ್ನು ದಿನಾಂಕ 18–02–2002ರ ಈ ಕಛೇರಿ ಆದೇಶದಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ (ನಿ) ತೋವಿನಕೆರೆ, ಕೊರಟಗೆರೆ ತಾಲ್ಲೋಕು ಈ ಸಂಘದ ಹೆಸರಿಗೆ ಈ ಕೆಳಕಂಡ ಷೆಡ್ಯೂಲ್ ಸ್ವತ್ತುಗಳನ್ನು ಸ್ಥಿರೀಕರಣಗೊಳಿಸಿ, ಆದೇಶ ನೀಡಲಾಗಿತ್ತು. ಈಗ ತೀರ್ಮರುಣಿದಾರರಾದ ಶ್ರೀ ಮಲ್ಲಪ್ಪ ಇವರಿಂದ ಸಂಘಕ್ಕೆ ಬರಬೇಕಾದ ಪೂರಾ ಹಣ ಸಂದಾಯವಾಗಿದ್ದು ಸದರಿ ಸ್ಥಿರ ಆಸ್ತಿಗಳನ್ನು ಮೂಲ ಹಕ್ಕುದಾರರಿಗೆ ಪುನರ್ ವರ್ಗಾಯಿಸುವಂತೆ ಸಂಘವು ಕೋರಿಕೊಂಡ ಮೇರೆಗೆ ಈ ಕೆಳಕಂಡ ಸ್ಥಿರ ಆಸ್ತಿಗಳನ್ನು ಶ್ರೀಯುತ ಮಲ್ಲಪ್ಪ ಬಿನ್ ಗಂಗಪ್ಪ, ತೋವಿನಕೆರೆ, ಕೊರಟಗೆರೆ ತಾಲ್ಲೋಕು ಇವರಿಗೆ ನಿರ್ದಿಷ್ಠ ಮಾಡತಕ್ಕದೆಂದು ಮತ್ತು ಈ ಪ್ರಮಾಣ ಪತ್ರದಲ್ಲಿ ವಿಧಿಸಲಾದ ಷರತ್ತುಗಳಿಗೆ ಮತ್ತು ನಿಯಮಾವಳಿಗೆ ಒಳಪಟ್ಟು ಶ್ರೀಯುತ ಮಲ್ಲಪ್ಪ ಬಿನ್ ಗಂಗಪ್ಪ, ತೋವಿನಕೆರೆ, ಕೊರಟಗೆರೆ ತಾಲ್ಲೋಕು ಇವರಿಗೆ ಒಪ್ಪಿಸತಕ್ಕದೆಂದು ಮತ್ತು ಕಾಯ್ದೆ ಕಲಂ 101ರ ಮತ್ತು ನಿಯಮ 38(ಎ)(15)ರ ರೀತ್ಯಾ ಈ ಮೇಲಿನ ಆದೇಶ ನೀಡಲಾಗಿದೆ. ಪುನರ್ ವರ್ಗಾವಣೆ ಮಾಡಿರುವ ಸ್ವತ್ತುಗಳ ವಿವರವನ್ನು ಈ ಪ್ರಮಾಣ ಪತ್ರದೊಂದಿಗೆ ಲಗತ್ತಿಸಿದೆ.

–: ಷರತ್ತುಗಳು ಮತ್ತು ನಿಯಮಾವಳಿಗಳು :–

1) ಶ್ರೀಯುತ ಮಲ್ಲಪ್ಪ ಬಿನ್ ಗಂಗಪ್ಪ, ಎಸ್.ಎಂ. ಗೊಲ್ಲಹಳ್ಳಿ, ದಬ್ಬೆಘಟ್ಟ ಅಂಚೆ, ಮಧುಗಿರಿ ತಾಲ್ಲೋಕು ಇವರಿಗೆ ಪುನರ್ ವರ್ಗಾವಣೆ ಮಾಡುವ ಸ್ವತ್ತುಗಳನ್ನು ಇವರೇ ಉಪಯೋಗಿಸತಕ್ಕದ್ದು.

2) ಪುನ: ಮಾರಾಟ ಮಾಡುವ ಹಕ್ಕು ಇವರು ಹೊಂದಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು.
ಮಧುಗಿರಿ ಉಪವಿಭಾಗ, ಮಧುಗಿರಿ

**ಸ್ವತ್ತುಗಳ ವಿವರ**

| ಕ್ರ.ಸಂ. | ಗ್ರಾಮದ ಹೆಸರು ತಾಲ್ಲೋಕು ಮತ್ತು ಜಿಲ್ಲೆಯ ಹೆಸರು | ಸರ್ವೆ ನಂಬರ್ | ಖಾತೆದಾರರ ಹೆಸರು | ವಿಸ್ತೀರ್ಣ | ಚೆಕ್ಕುಬಂದಿ |
|---|---|---|---|---|---|
| 01 | ಎಸ್.ಎಂ. ಗೊಲ್ಲಹಳ್ಳಿ ದೊಡ್ಡೇರಿ ಮಧುಗಿರಿ ತಾಲ್ಲೋಕು | 69/1 | ವ್ಯವಸ್ಥಾಪಕರು ವಿ.ಎಸ್.ಎಸ್.ಎನ್. ತೋವಿನಕೆರೆ | 1) 46 X 60 ಅಡಿಗಳ ನಿವೇಶನ 2) 10 X 40 ನಿವೇಶನ 03160 ಚದರಡಿಗಳು | ಪೂರ್ವಕ್ಕೆ – ಜಯಲಕ್ಷ್ಮಮ್ಮನವರ ಜಮೀನು<br>ಪಶ್ಚಿಮಕ್ಕೆ – ಟಿ. ರಾಮಣ್ಣನವರ ನಿವೇಶನ ಮತ್ತು ಆರ್.ಸಿ.ಸಿ. ಕಟ್ಟಡ<br>ಉತ್ತರಕ್ಕೆ – ಮಧುಗಿರಿ ಶಿರಾರಸ್ತೆ<br>ದಕ್ಷಿಣಕ್ಕೆ – ಜಯಲಕ್ಷ್ಮಮ್ಮನವರ ಜಮೀನು |
| 02 | ಎಸ್.ಎಂ. ಗೊಲ್ಲಹಳ್ಳಿ ದೊಡ್ಡೇರಿ ಹೋಬಳಿ ಮಧುಗಿರಿ ತಾಲ್ಲೋಕು | 62 | ವ್ಯವಸ್ಥಾಪಕರು ವಿ.ಎಸ್.ಎಸ್.ಎನ್. ತೋವಿನಕೆರೆ | 5.18 ಖುಷ್ಕಿ | ಪೂರ್ವಕ್ಕೆ – ಕೈಮರ – ತೋವಿನಕೆರೆ ರಸ್ತೆ<br>ಪಶ್ಚಿಮಕ್ಕೆ – ತಿಮ್ಮಯ್ಯನ ಜಮೀನು<br>ಉತ್ತರಕ್ಕೆ – ಸಣ್ಣನರಸಿಂಹಯ್ಯನ ಜಮೀನು<br>ದಕ್ಷಿಣಕ್ಕೆ – ರಾಮಕ್ಕನ ಜಮೀನು |
| 03 | ಎಸ್.ಎಂ. ಗೊಲ್ಲಹಳ್ಳಿ ದೊಡ್ಡೇರಿ ಹೋಬಳಿ ಮಧುಗಿರಿ ತಾಲ್ಲೋಕು | 87 | ವ್ಯವಸ್ಥಾಪಕರು ವಿ.ಎಸ್.ಎಸ್.ಎನ್. ತೋವಿನಕೆರೆ | | ಪೂರ್ವಕ್ಕೆ – ಸರ್ಕಾರಿ ದಾರಿ<br>ಪಶ್ಚಿಮಕ್ಕೆ – ಸಣ್ಣರಂಗಪ್ಪನ ಜಮೀನು<br>ಉತ್ತರಕ್ಕೆ – ಪಾಠಶಾಲೆ, ಮತ್ತು ಸರ್ಕಾರಿ ಜಮೀನು<br>ದಕ್ಷಿಣಕ್ಕೆ – ಹುಸೇನಾಬಿ ಮನೆ |

ಪಿಆರ್–401

ಸಹಕಾರ ಸಂಘಗಳ ಸಹಾಯಕ ನಿಬಂಧಕರು.
ಮಧುಗಿರಿ ಉಪವಿಭಾಗ, ಮಧುಗಿರಿ

**ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು**

**ವಿಷಯ:** ಶ್ರೀ ರೇಣುಕಾಂಬ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಕಂದಿಕೆರೆ, ಚಿ.ನಾ.ಹಳ್ಳಿ ತಾಲ್ಲೂಕು ಇದರ ನೊಂದಣಿ ರದ್ದತಿ ಬಗ್ಗೆ.

**ಉಲ್ಲೇಖ:** 1) ಸಮಾಪನಾ ಆದೇಶ ಸಂ.ಡಿಅರ್‌ಟಿ:ಎಲ್‌ಕ್ಯೂಡಿ:07:2010–11 ದಿನಾಂಕ:30–6–2010

2) ಸಹಕಾರ ಅಭಿವೃದ್ಧಿ ಅಧಿಕಾರಿಗಳು ಚಿ.ನಾ.ಹಳ್ಳಿ, ಇವರ ಪ್ರಸ್ತಾವೆ ಸಂ.ಸ.ಅ:ಚಿ.ನಾಹಳ್ಳಿ/ನೊಂದಣಿ ರದ್ದತಿ/53/2010–11 ದಿನಾಂಕ:28–2–2010

3) ಸಹಕಾರ ಸಂಘಗಳ ಸಹಾಯಕ ನಿಬಂಧಕರು ತಿಪಟೂರು ಇವರ ಪ್ರಸ್ತಾವೆ ಸಂ:ಸನಿ–34/ಸಮಾಪನೆ/29/2010–11 ದಿನಾಂಕ:28–2–11.

**ಪ್ರಸ್ತಾವನೆ:**

ಶ್ರೀ ರೇಣುಕಾಂಬ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಕಂದಿಕೆರೆ, ಚಿ.ನಾ.ಹಳ್ಳಿ ತಾಲ್ಲೂಕು ಸಂಘವು ಉದ್ದೇಶಿತ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡ ಕಾರಣ ಉಲ್ಲೇಖ (1)ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ ಸಮಾಪನಾಧಿಕಾರಿಯನ್ನಾಗಿ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಚಿ.ನಾಹಳ್ಳಿ ಇವರನ್ನು ನೇಮಿಸಿ ಆದೇಶಿಸಲಾಗಿತ್ತು.

ಉಲ್ಲೇಖ(2)ರ ರೀತ್ಯಾ ಸಮಾಪನಾಧಿಕಾರಿಗಳು ಆಸ್ತಿ ಜವಾಬ್ದಾರಿ ರೀತ್ಯಾ ತೀರುವಳಿ ಮಾಡಿ ನೊಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸಿರುವುದನ್ನು ಉಲ್ಲೇಖ(3)ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಇವರ ನೊಂದಣಿ ರದ್ದುಗೊಳಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಪ್ರಯುಕ್ತ ಈ ಕೆಳಕಂಡ ಆದೇಶ ನೀಡಿದೆ.

**ಆದೇಶ**

**ಸಂ.ಡಿಆರ್‌ಟಿ:ಎಲ್‌ಕ್ಯೂಡಿ:01/2010–11, ದಿನಾಂಕ:22ನೇ ಮಾರ್ಚ್ 2011**

ಶ್ರೀ ಆರ್. ಲೋಕೇಶ್, ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಸರ್ಕಾರದ ಅಧಿಸೂಚನೆ ಸಂ.ಸಿಎಂಡಬ್ಲ್ಯೂ 69 ಸಿಎಲ್ಎಂ2001 ದಿನಾಂಕ:21–11–2001ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಸಮಾಪನೆಗೊಂಡಿರುವ ಶ್ರೀ ರೇಣುಕಾಂಬ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ.,

ಕಂದಿಕೆರೆ, ಚಿ.ನಾ.ಹಳ್ಳಿ, ತಾಲ್ಲೂಕು ಈ ಸಂಘದ ನೊಂದಣಿ ಸಂಖ್ಯೆ ಸನಿ–34/ನೊಂದಣಿ/26820/2000–01 ದಿನಾಂಕ:14–12–2000ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ ಇಂದಿನಿಂದ ಸಂಘವು ಅಸ್ತಿತ್ವದಲ್ಲಿರುವುದಿಲ್ಲ ಮತ್ತು ವಿಸರ್ಜನೆಗೊಂಡಿರುತ್ತದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ದಿನಾಂಕ:22–3–2011ರಂದು ನೀಡಿದೆ.

ಸಹಕಾರ ಸಂಘಗಳ ಉಪ ನಿಬಂಧಕರು.
ತುಮಕೂರು ಜಿಲ್ಲೆ, ತುಮಕೂರು

ಪಿಆರ್–403

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ–441) ಹಾಗೂ ವಸೂಲಾಧಿಕಾರಿಗಳು**

**ಕ.ರಾ.ಸ.ಪ.ಬ್ಯಾಂಕುಗಳ ಮಹಾಮಂಡಳ ನಿ., ನಂ.132, ಕೆ.ಹೆಚ್.ರಸ್ತೆ, ಬೆಂಗಳೂರು–27.**

**ಕ್ರಮ ಸಂಖ್ಯೆ:ಎಆರ್೯/ಯುಬಿಎಫ್/605/2010–11, ದಿನಾಂಕ:30.03.2011**

**ವಿಷಯ:** ಮಹಿಳಾ ಕೋ–ಆಪರೇಟಿವ್ ಬ್ಯಾಂಕ್ ಲಿ., ಬನಶಂಕರಿ ಶಾಖೆ, ಬೆಂಗಳೂರು ಇದರ ಅಮಲ್ಜಾರಿ ಅರ್ಜಿ ಸಿಇಪಿ ಸಂಖ್ಯೆ:ಎಆರ್೯/ಯುಬಿಎಫ್/605/2010–11ಕ್ಕೆ ಸಂಬಂದಪಟ್ಟಂತೆಸ್ಥಿರಾಸ್ತಿಯನ್ನು 1960 ನೇ ಕರ್ನಾಟಕ ಸಹಕಾರ ಸಂಘಗಳ ನಿಯಮಗಳ ನಿಯಮ 38(6)(a) ರನ್ವಯ ಮಾರಾಟ ಸ್ಥಿರೀಕರಣಗೊಳಿಸುವ ಬಗ್ಗೆ.

**ಉಲ್ಲೇಖ:** 1. ದಾವಾ ಸಂಖ್ಯೆ: ಜೆಆರ್‌ಡಿ/ಯುಬಿಎಫ್/2693/2009–10
2. ಅಮಲ್ಜಾರಿ ಅರ್ಜಿ ಸಂಖ್ಯೆ : ಎಆರ್೯/ಯುಬಿಎಫ್/605/2010–11
3. ಮಾರಾಟಾಧಿಕಾರಿಯವರ ವರದಿ ದಿನಾಂಕ:29.03.2011

**ಪ್ರಸ್ತಾವನೆ:**

ಶ್ರೀಮತಿ.ಎ.ವರಲಕ್ಷ್ಮಿ ಇವರು ತಮ್ಮ ಸ್ಥಿರಾಸ್ತಿಯಾದ ಮನೆ ನಂ.1441/1, ಎನ್‌ಜಿಓ'ಸ್ ಕಾಲೋನಿ, ಕಮಲಾನಗರ ಬಡಾವಣೆ ಸರ್ವೆ ನಂ.46, ಪಿಐಡಿ.ಸಂಖ್ಯೆ:16–54–1441/1, ಕಮಲಾನಗರ ಬೆಂಗಳೂರು–79 ಇವರು ಮಹಿಳಾ ಕೋ–ಆಪರೇಟಿವ್ ಬ್ಯಾಂಕ್ ಲಿ., ಬನಶಂಕರಿ ಶಾಖೆ, ಬೆಂಗಳೂರು ಈ ಬ್ಯಾಂಕಿನಿಂದ ದಿನಾಂಕ: 15.11.2005 ರಂದು ರೂ.12,00,000=00 (ರೂಪಾಯಿ ಹನ್ನೆರಡು ಲಕ್ಷಗಳು ಮಾತ್ರ) ಗಳನ್ನು ಸ್ಥಿರಾಸ್ತಿ ಅಡಮಾನ ಮಾಡಿ ಸಾಲವಾಗಿ ಪಡೆದು ಬ್ಯಾಂಕಿನ ಸಾಲ ಮಂಜೂರಾತಿಯ ಷರತ್ತು ಮತ್ತು ನಿಯಮಗಳ ಪ್ರಕಾರ ಸಾಲವನ್ನು ಮರುಪಾವತಿಸಲು ವಿಫಲರಾಗಿ ಸುಸ್ತಿದಾರರಾದ ಕಾರಣ ಸಾಲ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 70 ರನ್ವಯ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು (ನಿ–441)ದಾವಾ ಪಂಚಾಯ್ತಿನ್ಯಾಯಾಲಯ, ಕ.ರಾ.ಸ.ಪ.ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಇವರ ನ್ಯಾಯಾಲಯದಲ್ಲಿ ದಾವಾ ಸಂಖ್ಯೆ: ಜೆಆರ್‌ಡಿ/ಯುಬಿಎಫ್/2693/2009–10 ರಂತೆ ದಾವಾ ಹೂಡಿ ಆದೇಶ ಪಡೆದಿದ್ದರೂ ಸಾಲದ ಬಾಕಿ ವಸೂಲಾತಿಯಾಗಿರುವುದಿಲ್ಲ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು (ನಿ–441) ದಾವಾ ಪಂಚಾಯ್ತಿ ನ್ಯಾಯಾಲಯ, ಕ.ರಾ.ಸ.ಪ.ಬ್ಯಾಂ.ಮ.ನಿಯಮಿತ, ಬೆಂಗಳೂರು ಇವರ ನ್ಯಾಯಾಲಯದಿಂದ ಪಡೆದ ಡಿಕ್ರಿ ಆದೇಶದನ್ವಯ ಮಹಿಳಾ ಸಹಕಾರ ಬ್ಯಾಂಕಿನ ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ರ ನಿಯಮ 34 (1) ರನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು(ನಿ–441) ಮತ್ತು ವಸೂಲಾಧಿಕಾರಿಗಳು ಕ.ರಾ.ಸ.ಪ.ಬ್ಯಾಂಕುಗಳ ಮಹಾಮಂಡಳ ನಿ., ನಂ.132, ಕೆ.ಹೆಚ್.ರಸ್ತೆ, ಬೆಂಗಳೂರು–27 ಇವರ ಕಛೇರಿಯಲ್ಲಿ ಸಿ.ಇ.ಪಿ.ಸಂಖ್ಯೆ: ಎಆರ್೯/ಯುಬಿಎಫ್/605/2010–11 ರಂತೆ ಅಮಲ್ಜಾರಿ ಅರ್ಜಿ ದಾಖಲು ಮಾಡಲಾಗಿತ್ತು. ಸದರಿ ಅಮಲ್ಜಾರಿ ಅರ್ಜಿಯನ್ನು ಬ್ಯಾಂಕಿನ ಮಾರಾಟಾಧಿಕಾರಿಯವರಿಗೆ ವಹಿಸಲಾಗಿತ್ತು. ಸದರಿ ಮಾರಾಟಾಧಿಕಾರಿಯವರು ಅಂತಿಮವಾಗಿ ಅಮಲ್ಜಾರಿ ಕ್ರಮ ಕೈಗೊಂಡು ಬ್ಯಾಂಕಿನ ಸಾಲಕ್ಕೆ ಆಧಾರ ಮಾಡಿದ್ದ ಈ ಕೆಳಗೆ ಕಾಣಿಸಿದ ಸ್ಥಿರಾಸ್ತಿಯನ್ನು ದಿನಾಂಕ: 10.02.2011 ರಂದು ಸಾರ್ವಜನಿಕ ಹರಾಜಿಗೆ ತರಲಾಗಿತ್ತು.

ದಿನಾಂಕ 10.02.2011ರಂದು ನಡೆಸಿದ ಹರಾಜಿನಲ್ಲಿ 5 ಜನ ಬಿಡ್ದುದಾರರು ಭಾಗವಹಿಸಿದ್ದು, ಈ ಪೈಕಿ ಶ್ರೀ.ಎಂ.ಮಲ್ಲೇಶ್, ಬಿನ್.ಎಂ.ಮುನಿಲಿಂಗಪ್ಪ ನಂ.25/1, 'ಮಂಜುನಾಥ ಕಾಂಪ್ಲೆಕ್ಸ್', ಕುಂಬಾರಪೇಟೆ ಮುಖ್ಯರಸ್ತೆ, ಬೆಂಗಳೂರು–02 ಇವರು ರೂ.18,50,000=00(ಹದಿನೆಂಟು ಲಕ್ಷ ಐವತ್ತು ಸಾವಿರಗಳು) ಗಳಿಗೆ ಬಿಡ್ದು ಮಾಡಿದ್ದು, ಅತೀ ಹೆಚ್ಚು ಬೇಡಿದ ಬಿಡ್ದುದಾರರಾಗಿರುತ್ತಾರೆ.

ಡಿಕ್ರಿ ಆದೇಶ ಮತ್ತು ಅಮಲ್ಜಾರಿ ಅರ್ಜಿಯನ್ವಯ ಅಸಲು ರೂ.11,75,548=00 ಗಳು ಬಡ್ಡಿ ಮತ್ತು ಇತರೆ ವೆಚ್ಚಗಳು ರೂ.3,98,229=00 ಒಟ್ಟು ರೂ.15,73,777=00 ಗಳು ಬ್ಯಾಂಕಿಗೆ ಬರಬೇಕಾಗಿರುತ್ತದೆ. ರೂ.18,50,000=00ಗಳ ಅತೀ ಹೆಚ್ಚಿನ ಬಿಡ್ದುದಾರರಾದ ಶ್ರೀ.ಎಂ.ಮಲ್ಲೇಶ್, ಬಿನ್.ಎಂ.ಮುನಿಲಿಂಗಪ್ಪ ನಂ.25/1, 'ಮಂಜುನಾಥ ಕಾಂಪ್ಲೆಕ್ಸ್', ಕುಂಬಾರಪೇಟೆ ಮುಖ್ಯರಸ್ತೆ, ಬೆಂಗಳೂರು–02 ರವರು ಬಿಡ್ಡಿನ ಮೊತ್ತದ ಶೇಕಡಾ 15% ರೂ. 2,77,500=00ಗಳನ್ನು ಹರಾಜಿನ ಸ್ಥಳದಲ್ಲಿಯೇ ಬ್ಯಾಂಕಿಗೆ ಪಾವತಿಮಾಡಿರುತ್ತಾರೆ. ಉಳಿಕೆ ಬಾಕಿ ಶೇ% 85 ರಷ್ಟು ಮೊತ್ತ ರೂ.15,72,500=00 ಮತ್ತು ನೋಂದಾವಣಿ ವೆಚ್ಚ ರೂ.1,45,000=00 ಗಳು ಒಟ್ಟು ರೂ.17,17,500=00ಗಳನ್ನು ಕೂಡ ನಿಯಮಾನುಸಾರ ನಿಗದಿತ ಅವದಿಯಲ್ಲಿ ಪಾವತಿಮಾಡಿರುತ್ತಾರೆ.

ಮಹಿಳಾ ಸಹಕಾರ ಬ್ಯಾಂಕಿನ ಮಾರಾಟಾಧಿಕಾರಿಯವರು ದಿನಾಂಕ: 10.02.2011 ರಂದು ನಡೆಸಿದ ಸಾರ್ವಜನಿಕ ಹರಾಜನ್ನು ಕರ್ನಾಟಕ ಸಹಕಾರ ಸಂಘಗಳ ಕಾನೂನು ಮತ್ತು ನಿಯಮಗಳನ್ನು ಪಾಲಿಸಿ ಹರಾಜು ಕ್ರಮವನ್ನು ನಡೆಸಿರುವುದಾಗಿ ಹಾಗೂ ಬ್ಯಾಂಕಿನ ಬಾಕಿದಾರರಾದ ಶ್ರೀಮತಿ.ಎ.ವರಲಕ್ಷ್ಮಿ ರವರ ಸ್ಥಿರಾಸ್ತಿಯನ್ನು ಶ್ರೀ.ಎಂ.ಮಲ್ಲೇಶ್, ಬಿನ್.ಎಂ.ಮುನಿಲಿಂಗಪ್ಪ ನಂ.25/1, 'ಮಂಜುನಾಥ ಕಾಂಪ್ಲೆಕ್ಸ್', ಕುಂಬಾರಪೇಟೆ ಮುಖ್ಯರಸ್ತೆ, ಬೆಂಗಳೂರು–02 ರವರಿಗೆ ಮಾರಾಟ ಮಾಡಿರುವ ಆಸ್ತಿಯ ಹರಾಜನ್ನು ಖಾಯಂ

ಗೊಳಿಸಬೇಕೆಂದು ಉಲ್ಲೇಖ (3) ರಂತೆ ಈ ಕಛೇರಿಗೆ ಸವಿಸ್ತಾರವಾದ ವರದಿಯನ್ನು ಸಲ್ಲಿಸಿರುತ್ತಾರೆ. ದಿನಾಂಕ: 10.02.2011 ರಂದು ನಡೆಸಿದ ಸ್ಥಿರಾಸ್ತಿ ಬಹಿರಂಗ ಹರಾಜಿನ ನಡಾವಳಿಕೆಯನ್ನು ಪರಿಶೀಲಿಸಿದಾಗ ಸದರಿ ಸ್ಥಿರಾಸ್ತಿ ಬಹಿರಂಗ ಹರಾಜಿನಲ್ಲಿ ಒಟ್ಟು 5 ಜನ ಬಿಡ್ಡುದಾರರು ಭಾಗವಹಿದ್ದು ಈ ಪೈಕಿ ಅತ್ಯಧಿಕ ಬಿಡ್ಡುದಾರರಾದ ಶ್ರೀ.ಎಂ.ಮಲ್ಲೇಶ್, ಬಿನ್.ಎಂ.ಮುನಿಲಿಂಗಪ್ಪ ನಂ.25/1, 'ಮಂಜುನಾಥ ಕಾಂಪ್ಲೆಕ್ಸ್', ಕುಂಬಾರಪೇಟೆ ಮುಖ್ಯರಸ್ತೆ, ಬೆಂಗಳೂರು–02 ಇವರಿಗೆ ರೂ.18,50,000=00 ಗಳಿಗೆ ಮಾರಾಟ ಮಾಡಿರುವುದು ದಾಖಲಾತಿಗಳಿಂದ ತಿಳಿದು ಬಂದಿರುತ್ತದೆ. ಬಹಿರಂಗ ಹರಾಜು ನಡೆದ 30 ದಿನಗಳೊಳಗೆ ಬಾಕಿದಾರರು ವಾದಿ ಬ್ಯಾಂಕಿಗೆ ಬರಬೇಕಾದ ಸಾಲವನ್ನು ಮರುಪಾವತಿ ಮಾಡದಿರುವುದರಿಂದ ಮತ್ತು ಈ ಬಗ್ಗೆ ಯಾವುದೇ ಆಕ್ಷೇಪಣೆ ಸಲ್ಲಿಸದೇ ಇರುವುದರಿಂದ ದಿನಾಂಕ: 10.02.2011 ರಂದು ನಡೆಸಲಾದ ಸ್ಥಿರಾಸ್ತಿ ಹರಾಜನ್ನು ಖಾಯಂಗೊಳಿಸಬಹುದೆಂದು ಮಾರಾಟಾಧಿಕಾರಿಯವರು ಸಲ್ಲಿಸಿದ ವರದಿಯನ್ನು ಪರಿಶೀಲಿಸಿ ಮಾರಾಟಾಧಿಕಾರಿಯವರು ಕೈಗೊಂಡ ಕ್ರಮಗಳು ಕಾನೂನು ಬದ್ದವಾಗಿದೆ ಎಂದು ಕಂಡು ಬಂದಿರುವುದರಿಂದ ಈ ಕೆಳಗಿನ ಸ್ಥಿರೀಕರಣ ಆದೇಶ ಹೊರಡಿಸಲಾಗಿದೆ.

**ಆದೇಶ**

ಶ್ರೀ.ಎಸ್.ಎಸ್.ಕಟಗೇರಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ–441) ಹಾಗೂ ವಸೂಲಾಧಿಕಾರಿಗಳು, ಕ.ರಾ.ಸ.ಪ.ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು–27 ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38(6)(a) ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಅರ್ಜಿ ಸಂಖ್ಯೆ ಎಆರ್‌ಇ/ಯುಬಿಎಫ್/605/2010–11 ರಲ್ಲಿ ಶ್ರೀಮತಿ.ಎ.ವರಲಕ್ಷ್ಮಿ ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ದಿನಾಂಕ.10.02.2011 ರಂದು ವಾದಿ ಬ್ಯಾಂಕಿನ ಮಾರಾಟಾಧಿಕಾರಿಯವರು ಮಾಡಿದ ಬಹಿರಂಗ ಹರಾಜಿನಲ್ಲಿ ಶ್ರೀ.ಎಂ.ಮಲ್ಲೇಶ್, ಬಿನ್.ಎಂ.ಮುನಿಲಿಂಗಪ್ಪ ನಂ.25/1, 'ಮಂಜುನಾಥ ಕಾಂಪ್ಲೆಕ್ಸ್', ಕುಂಬಾರಪೇಟೆ ಮುಖ್ಯರಸ್ತೆ, ಬೆಂಗಳೂರು–02 ಇವರು ಅತೀ ಹೆಚ್ಚಿನ ಬಿಡ್ಡುದಾರರಾಗಿದ್ದು, ಇವರಿಗೆ ರೂ.18,50,000=00 ಗಳಿಗೆ ಈ ಕೆಳಗೆ ವಿವರಿಸಿದ ಸ್ಥಿರಾಸ್ತಿಯನ್ನು ಬಹಿರಂಗವಾಗಿ ಹರಾಜು ಮೂಲಕ ಮಾರಾಟ ಮಾಡಿರುವುದನ್ನು ಖಾಯಂಗೊಳಿಸಿ ಸ್ಥಿರೀಕರಿಸಿರುತ್ತೇನೆ.

**ಸ್ಥಿರಾಸ್ತಿಯ ವಿವರ**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ 16ನೇ ವಾರ್ಡ್‌ಗೆ ಸೇರಿದ ಬೆಂಗಳೂರು ಸಿಟಿ ಕಮಲಾನಗರ ಬಡಾವಣೆ ಸರ್ವೆ ನಂ.46ರಲ್ಲಿರುವ ಪಿ.ಐ.ಡಿ.ಸಂಖ್ಯೆ:: 16–54–144/1ರಲ್ಲಿ ದಾಖಲಾಗಿರುವ ಹಾಲಿ ಕಾರ್ಪೋರೇಷನ್ 1441/1ನೇ ನಂಬರು ನಿವೇಶನ ಮತ್ತು ಸದರಿ ನಿವೇಶನದಲ್ಲಿ ಕಟ್ಟಿರುವ ಮನೆಗಳು, ಮರ ಗಿಡಗಳು, ವಿದ್ಯುಚಕ್ತಿ ಸಂಪರ್ಕ ಸಹಿತವಾದ ಪೂರಾ ಸ್ವತ್ತು

**ಅಳತೆ ಮತ್ತು ಚೆಕ್ಕು ಬಂದಿ** :
ಪೂರ್ವ------------>ಪಶ್ಚಿಮ :– 15–0 ಅಡಿಗಳು
ಉತ್ತರ------------>ದಕ್ಷಿಣ :– 40–0 ಅಡಿಗಳು
ಪೂರ್ವಕ್ಕೆ :– 1441ನೇ ನಂಬರು ಸ್ಥಿರಾಸ್ತಿಯ ಪೂರ್ವ ಭಾಗದ ಸ್ವತ್ತು
ಪಶ್ಚಿಮಕ್ಕೆ :– ಸ್ಥಿರಾಸ್ತಿ ಸಂಖ್ಯೆ 879
ಉತ್ತರಕ್ಕೆ :– ರಸ್ತೆ
ದಕ್ಷಿಣಕ್ಕೆ :– ಸ್ಥಿರಾಸ್ತಿ ಸಂಖ್ಯೆ 881

**ಮಾರಾಟದ ಮೊಬಲಗು : ರೂ. 18,50,000=00**
**ಮಾರಾಟ ಮಾಡಿದ ದಿನಾಂಕ : 10.02.2011**

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ 30.03.2011 ರಂದು ನೀಡಲಾಗಿದೆ.

**ಎಸ್.ಎಸ್.ಕಟಗೇರಿ**
ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ–441)
ಮತ್ತು ವಸೂಲಾಧಿಕಾರಿಗಳು, ಕ.ರಾ.ಸ.ಪ.ಬ್ಯಾಂಕುಗಳ
ಮಹಾಮಂಡಳ ನಿ., ನಂ.132, ಕೆ.ಹೆಚ್.ರಸ್ತೆ, ಬೆಂಗಳೂರು–560 027.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ–441) ಹಾಗೂ ವಸೂಲಾಧಿಕಾರಿಗಳು**
**ಕ.ರಾ.ಸ.ಪ.ಬ್ಯಾಂಕುಗಳ ಮಹಾಮಂಡಳ ನಿ., ನಂ.132, ಕೆ.ಹೆಚ್.ರಸ್ತೆ, ಬೆಂಗಳೂರು–27.**
**ಕ್ರಮ ಸಂಖ್ಯೆ:ಎಆರ್‌ಇ/ಯುಬಿಎಫ್/605/2010–11, ದಿನಾಂಕ:30.03.2011**

**ಫಾರಂ ನಂ.11**

**38ನೇಯ ರೂಲಿನ 7ನೇಯ ಕಲಂ**

**ಸ್ಥಿರ ಸ್ವತ್ತುಗಳನ್ನು ಕೊಂಡದ್ದಕ್ಕೆ ಪ್ರಕಟಣೆ**

ಬೆಂಗಳೂರು ಜಿಲ್ಲಾ, ಬೆಂಗಳೂರು ತಾಲ್ಲೂಕು ಕಮಲಾನಗರದಲ್ಲಿ ವಾಸವಾಗಿರುವ ಶ್ರೀಮತಿ.ಎ.ವರಲಕ್ಷ್ಮಿ ಕೋಂ.ಆನಂದಕುಮಾರ್ ಇವರ ಮಾಲೀಕತ್ವದ ಈ ಕೆಳಗೆ ತೋರಿಸಿದ ಸ್ಥಿರಸ್ವತ್ತನ್ನು ಬಹಿರಂಗವಾದ ಹರಾಜಿನಲ್ಲಿ ಶ್ರೀ.ಎಂ.ಮಲ್ಲೇಶ್, ಬಿನ್.ಎಂ.ಮುನಿಲಿಂಗಪ್ಪ, ನಂ.25/1, 'ಮಂಜುನಾಥ ಕಾಂಪ್ಲೆಕ್ಸ್', ಕುಂಬಾರಪೇಟೆ ಮುಖ್ಯರಸ್ತೆ, ಬೆಂಗಳೂರು–02 ರವರು ದಿನಾಂಕ:10.02.2011 ರಂದು ಕ್ರಯಕ್ಕೆ ಪಡೆಕೊಂಡಿದ್ದಾರಾಗಿಯೂ ಮತ್ತು ದರಖಾಸ್ತು ಹಣ ರೂ.18,50,000=00 (ರೂಪಾಯಿ ಹದಿನೆಂಟು ಲಕ್ಷ ಐವತ್ತು ಸಾವಿರಗಳು ಮಾತ್ರ) ಗಳನ್ನು ಸಂಪೂರ್ಣವಾಗಿ ಪಾವತಿಮಾಡಿದ್ದಾರಾಗಿಯೂ ಈ ಮೂಲಕ ಬಹಿರಂಗವಾಗಿ ತಿಳಿಸೋಣವಾಗುತ್ತದೆ. ಆದ ಪ್ರಯುಕ್ತ ಸದರಿ ಸ್ಥಿರಸ್ವತ್ತಿನಲ್ಲಿರುವ ಬಾಕೀದಾರನ ಎಲ್ಲಾ ಹಕ್ಕು–ವ–ಪ್ರಯೋಜನಗಳಿಗೆ ಸದರಿ ಶ್ರೀ.ಎಂ.ಮಲ್ಲೇಶ್, ಬಿನ್.ಎಂ.ಮುನಿಲಿಂಗಪ್ಪ, ನಂ.25/1,

'ಮಂಜುನಾಥ ಕಾಂಪ್ಲೆಕ್ಸ್', ಕುಂಬಾರಪೇಟೆ ಮುಖ್ಯರಸ್ತೆ, ಬೆಂಗಳೂರು–02 ಇವರು ಉತ್ತರಾಧಿಕಾರರಾಗಿದ್ದಾರೆ ಎಂಬುದಾಗಿ ಈ ಮೂಲಕ ದೃಢಪಡಿಸೋಣವಾಗುತ್ತದೆ.

| ಗ್ರಾಮ ಮತ್ತು ತಾಲ್ಲೂಕು | ಸ್ಥಿರಸ್ವತ್ತುಗಳ ವಿವರ ತರಹ | ಸ. ನಂ. | ಪಿಐಡಿ.ಸಂ ಆಕಾರ | ಖಾತೆದಾರನ ಹೆಸರು | ಅಂದಾಜು ವಿಸ್ತೀರ್ಣ ಎಕರೆ ಗುಂಟೆ | ಷರಾ |
|---|---|---|---|---|---|---|
| 1 | 2 | 3 | 4 | 5 | 6 | 7 |
| ಕಮಲಾನಗರ ಬಡಾವಣೆ, ಬೆಂಗಳೂರು ತಾಲ್ಲೂಕು | ನೆಲ ಮಹಡಿ ಮತ್ತು ಡುಪ್ಲೆಕ್ಸ್ ಮನೆ | 46 | ನಂ.16–54–1441 | ಶ್ರೀಮತಿ.ಎ.ವರಲಕ್ಷ್ಮಿ | ಪೂ→ಪ 15.0 ಅಡಿ ಉ→ದ 40.0 ಅಡಿ | ಸದರಿ ಸ್ಥಿರಸ್ವತ್ತಿನಲ್ಲಿರುವ ಬಾಕೀದಾರನ ಎಲ್ಲಾ ಹಕ್ಕು–ವ–ಪ್ರಯೋಜನಗಳಿಗೆ ಸದರಿ ಶ್ರೀ.ಎಂ.ಮಲ್ಲೇಶ್, ಬಿನ್.ಎಂ.ಮುನಿಲಿಂಗಪ್ಪ, ನಂ.25/1, 'ಮಂಜುನಾಥ ಕಾಂಪ್ಲೆಕ್ಸ್', ಕುಂಬಾರಪೇಟೆ ಮುಖ್ಯರಸ್ತೆ, ಬೆಂಗಳೂರು–02 ಇವರು ಉತ್ತರಾಧಿಕಾರರಾಗಿದ್ದಾರೆ |

ಸ್ಥಳ: ಬೆಂಗಳೂರು

ಸೂಚನೆ: ಮಾರಾಟ ಮಾಡಲ್ಪಟ್ಟ ಸ್ಥಿರಸ್ವತ್ತುಗಳು ಇರುವ ಗ್ರಾಮದಲ್ಲಿಯೂ ಜಿಲ್ಲಾ ಗೆಜೆಟ್‌ನಲ್ಲಿಯೂ ಈ ಇಸ್ತಿಹಾರನ್ನು ಪ್ರಕಟಿಸತಕ್ಕದ್ದು.

**ಎಸ್.ಎಸ್.ಕಟಗೇರಿ**

ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ–441)

ಮತ್ತು ವಸೂಲಾಧಿಕಾರಿಗಳು, ಕ.ರಾ.ಸ.ಪ.ಬ್ಯಾಂಕುಗಳ

ಪಿಆರ್–415 ಮಹಾಮಂಡಳ ನಿ., ನಂ.132, ಕೆ.ಹೆಚ್.ರಸ್ತೆ, ಬೆಂಗಳೂರು–560 027.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪ ವಿಭಾಗ ಮಧುಗಿರಿ ಇವರ ಕಚೇರಿ ನಡವಳಿಕೆಗಳು**

**ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38(7) ರ ನ್ವಯ ನೀಡಿದ ಮಾರಾಟ ದೃಢೀಕರಣ ಪತ್ರ**

**ಅಮಲ್ಜಾರಿ ಅರ್ಜಿ ಸಂಖ್ಯೆ:60/2002–03**

**ಉಪಸ್ಥಿತರು :** ಹೆಚ್.ಡಿ. ಶಿವಣ್ಣ, ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಮಧುಗಿರಿ ಉಪ ವಿಭಾಗ ಮಧುಗಿರಿ

**ಡಿಕ್ರಿ ಹೋಲ್ಡರ್**
ವ್ಯವಸ್ಥಾಪಕರು
ದಿ ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ, ಶಿರಾ ತುಮಕೂರು ಜಿಲ್ಲೆ

**ತೀರ್ಪುಋಣಿ:**
ಎಸ್.ಪಿ. ರಾಜೇಂದ್ರ ಬಿನ್ ಎಂ.ಆರ್. ಪಾಂಡುರಂಗಯ್ಯ
ಬನ್ನಿನಗರ, ಶಿರಾ

ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ, ಶಿರಾ. ತುಮಕೂರು ಜಿಲ್ಲೆ ಇವರು ದಿನಾಂಕ:23–03–2004ರಂದು ಪಡೆದ ಡಿಕ್ರಿ ನಂ.4445/ 2003–04 ರ ಪ್ರಕಾರ ದಿನಾಂಕ:22–10–2005 ರಂದು ಸಿ.ಇ.ಪಿ.ನಂ.7430/2005–06 ರ ಪ್ರಕಾರ ಪಡೆದ ಅಮಲ್ಜಾರಿ ಮೇಲೆ ಡಿಕ್ರಿ ಹೋಲ್ಡರ್ ಬ್ಯಾಂಕಿನ ಮಾರಾಟಾಧಿಕಾರಿಯು ಮೇಲ್ಕಂಡ ತೀರ್ಪುಋಣಿದಾರರಾದ ಎಸ್.ಪಿ.ರಾಜೇಂದ್ರ ಬಿನ್ ಎಂ.ಆರ್.ಪಾಂಡುರಂಗಯ್ಯ, ರಂಗಯ್ಯ, ಬನ್ನಿನಗರ, ಶಿರಾ ಇವರು ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಆಧಾರ ಮಾಡಿದ್ದ ಈ ಕೆಳಕಂಡ ಸ್ಥಿರಾಸ್ತಿಯನ್ನು ದಿನಾಂಕ:16–07–2010 ರಂದು ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ. ಶಿರಾ ಈ ಬ್ಯಾಂಕಿಗೆ ಬರಬೇಕಾದ ಸುಸ್ತಿ ಸಾಲದ ವಸೂಲಿ ಬಗ್ಗೆ ಬಹಿರಂಗ ಹರಾಜು ನಡೆಸಿರುತ್ತಾರೆ.

ಈ ಬಹಿರಂಗ ಹರಾಜಿನಲ್ಲಿ ತೀರ್ಪುಋಣಿಯ ಸ್ಥಿರ ಸ್ವತ್ತನ್ನು ಜಿ.ನರಸಿಂಹಯ್ಯ ಬಿನ್ ಗುಡ್ಡಪ್ಪ, ಬಾಲಾಜಿನಗರ, ಶಿರಾ, ಟೌನ್, ತುಮಕೂರು ಜಿಲ್ಲೆ ಇವರು ರೂ.102000=00 ಗಳಿಗೆ ಅತಿ ಹೆಚ್ಚಿನ ಬಿಡ್ ಮೊತ್ತಕ್ಕೆ ಕೊಂಡಿರುತ್ತಾರೆ ಎಂದು ಈ ಮೂಲಕ ದೃಢೀಕರಿಸಿದೆ. ಆದ್ದರಿಂದ ಈ ಸ್ಥಿರಾಸ್ತಿಯ ಹರಾಜನ್ನು ಬಿಡ್ ದಾರರಾದ ಜಿ.ನರಸಿಂಹಯ್ಯ ಬಿನ್ ಗುಡ್ಡಪ್ಪ, ಇವರ ಹೆಸರಿಗೆ ಸ್ಥಿರೀಕರಣಗೊಳಿಸಿದೆ.

**ಸ್ಥಿರಾಸ್ತಿಯ ವಿವರ**

| ಕ್ರ.ಸಂ | ಗ್ರಾಮ ಮತ್ತು ತಾಲ್ಲೂಕು | ಸ್ಥಿರ ಸ್ವತ್ತುಗಳ ವಿವರ ತರಹೆ | ಖಾನೇಷು ಮಾರಿ ನಂ. | ಖಾತೆದಾರನ ಹೆಸರು | ವಿಸ್ತೀರ್ಣ | ಚಕ್ಕುಬಂದಿ |
|---|---|---|---|---|---|---|
| 1 | ಬೋವಿಕಾಲೋನಿ ಶಿರಾ ಟೌನ್ | ನಿವೇಶನ | 1087<br>1037<br>1030 | ಎಸ್.ಪಿ. ರಾಜೇಂದ್ರ ಬಿನ್ ಎಂ.ಆರ್.ಪಾಂಡುರಂಗಯ್ಯ ಮ ಬನ್ನಿನಗರ, ಶಿರಾ | 25 X 20 ಅಡಿಗಳು | ಪೂರ್ವಕ್ಕೆ: 15 ಅಡಿ ರಸ್ತೆ<br>ಪಶ್ಚಿಮಕ್ಕೆ:ಎಸ್.ಟಿ. ಹನುಮಂತಪ್ಪನ 105ನೇ ನಂಬರಿನ ನಿವೇಶನ<br>ಉತ್ತರಕ್ಕೆ :ರಂಗಪ್ಪನ 103ನೇ ನಂಬರಿನ ನಿವೇಶನ<br>ದಕ್ಷಿಣಕ್ಕೆ:ರಂಗಣ್ಣನ 101ನೇ ನಂಬರಿನ ನಿವೇಶನ |

ಮಾರಾಟದ ಮೊತ್ತ ರೂ, 102000=00

ಮಾರಾಟದ ದಿನಾಂಕ: 16–07–2010

ನಿಗದಿತ ಮುದ್ರಾಂಕ ಶುಲ್ಕ ರೂ 6854–00

ಈ ಆದೇಶವನ್ನು ನನ್ನ ಸಹಿ ಹಾಗೂ ಕಚೇರಿ ಮೊಹರಿನೊಂದಿಗೆ ಈ ದಿನ ದಿನಾಂಕ: –1–2011 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಮಧುಗಿರಿ ಉಪ–ವಿಭಾಗ, ಮಧುಗಿರಿ

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪ ವಿಭಾಗ ಮಧುಗಿರಿ ಇವರ ಕಚೇರಿ ನಡವಳಿಕೆಗಳು**

**ಡಿಕ್ರಿ ಹೋಲ್ಡರ್**
ವ್ಯವಸ್ಥಾಪಕರು
ದಿ ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ, ಶಿರಾ ತುಮಕೂರು ಜಿಲ್ಲೆ

**ತೀರ್ಪುಋಣಿ:**
ಎಸ್.ಪಿ. ರಾಜೇಂದ್ರ ಬಿನ್ ಎಂ.ಆರ್. ಪಾಂಡುರಂಗಯ್ಯ
ರಂಗಯ್ಯ, ಬನ್ನಿನಗರ, ಶಿರಾ

**ಪ್ರಸ್ತಾವನೆ:**

ಮಾರಾಟಾಧಿಕಾರಿ, ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ, ಶಿರಾ ತುಮಕೂರು ಜಿಲ್ಲೆ, ಇವರು ತೀರ್ಪು ಋಣಿಯಿಂದ ವಸೂಲಾಗಬೇಕಾದ ಆಧಾರ ಸಾಲ ರೂ.106000=00 ದಾವ ಶುಲ್ಕ ರೂ. 1420=00 ಮತ್ತು ಮುಂದುವರೆದ ಬಡ್ಡಿ ಇತರೆ ಖರ್ಚುಗಳಿಗೆ ಡಿಕ್ರಿ ಪಡೆದು ಅಮಲ್ಜಾರಿಗೆ ಅರ್ಜಿ ಹಾಕಿದ್ದು ಸದರಿ ಅಮಲ್ಜಾರಿ ಅರ್ಜಿ ಸಂಖ್ಯೆ 7430/2005–2006 ಮೊಬಲಗು ರೂ.107420=00 ರ ಪ್ರಕರಣಗಳನ್ನು ಸದರಿ ಬ್ಯಾಂಕಿನ ನಿಯಮ 441 ಮಾರಾಟಾಧಿಕಾರಿಯವರಿಗೆ ಅಮಲ್ಜಾರಿ ವಹಿಸಲಾಗಿತ್ತು. ಈಗ ದಿನಾಂಕ:16–7–2010 ಕ್ಕೆ ರೂ.2,96840–00 ಡಿಕ್ರಿಹೋಲ್ಡರ್ ಬ್ಯಾಂಕಿಗೆ ತೀರ್ಪುಋಣಿ ದಾರರಿಂದ ಬರಬೇಕಾಗಿರುತ್ತದೆ.

ಬಾಕಿ ವಸೂಲಿಗಾಗಿ ಮಾರಾಟಾಧಿಕಾರಿಗಳು ತೀರ್ಪುಋಣಿಯ ಸ್ಥಿರಸ್ವತ್ತುಗಳನ್ನು ದಿನಾಂಕ:23–12–2010 ರಂದು ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್‌ದಾರರಾದ ಶ್ರೀ ಜಿ. ನರಸಿಂಹಯ್ಯ ಬಿನ್ ಗುಡ್ಡಪ್ಪ, ಬಾಲಾಜಿನಗರ, ಶಿರಾ ಇವರ ಹೆಸರಿಗೆ ನಿವೇಶನವನ್ನು ರೂ.1,02,000=00 (ಒಂದು ಲಕ್ಷ ಎರಡು ಸಾವಿರ ರೂ.ಗಳು ಮಾತ್ರ) ಗಳಿಗೆ ಹರಾಜು ನಿಲ್ಲಿಸಿ ಹರಾಜು ಸ್ಥಿರೀಕರಣಕ್ಕಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಸ್ವತ್ತು ಹರಾಜಾದ 30 ದಿವಸಗಳೊಳಗೆ ಆಸ್ತಿಯ ಒಡೆತನವನ್ನು ಹೊಂದಿರುವ ಅಥವಾ ಆಸ್ತಿಯ ಹಿತಾಸಕ್ತಿ ಹೊಂದಿರುವ ವ್ಯಕ್ತಿಗಳಿಂದ ಸಹಕಾರಿ ಕಾಯ್ದೆ ನಿಯಮ 38 (4) (ಎ) ರೀತ್ಯ ನಿಯಮಾನುಸಾರ ಠೇವಣಿಮಾಡಿ ಮಾರಾಟವನ್ನು ರದ್ದುಗೊಳಿಸುವಂತೆ ಕೋರಿ ಯಾವ ವಿಧವಾದ ಅರ್ಜಿಯೂ ಬಂದಿಲ್ಲದ ಪ್ರಯುಕ್ತ ಸದರಿ ಷೆಡ್ಯೂಲ್‌ನಲ್ಲಿನ ಸ್ಥಿರಾಸ್ತಿಯನ್ನು ಅತ್ಯಧಿಕ ಹಾಗೂ ಅಂತಿಮ ಬಿಡ್ಡುದಾರರ ಹೆಸರಿಗೆ ಸ್ಥಿರೀಕರಣಗೊಳಿಸಬೇಕಾಗಿದೆ. ಆದುದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ನಂ.ಸ.ನಿ.33/ಎ.ಬಿ.ಎನ್/ಎಸ್.ಸಿ/ /2010–2011, ದಿನಾಂಕ: –2–2011**

ಹೆಚ್.ಡಿ.ಶಿವಣ್ಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪ ವಿಭಾಗ ಮಧುಗಿರಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಬಂಧನೆಗಳು 1960 ರ ನಿಯಮ 38(6)(ಎ) ಪ್ರಕಾರ ನನಗೆ ದತ್ತವಾಗಿರುವ ಅಧಿಕಾರದ ಮೇರೆಗೆ ಶಿರಾ ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ ಶಿರಾ ಇವರಿಗೆ ತೀರ್ಪುಋಣಿಗಳಾದ ಎಸ್.ಪಿ.ರಾಜೇಂದ್ರ ಬಿನ್ ಎಂ.ಪಿ. ಪಾಂಡುರಂಗಯ್ಯ, ಬನ್ನಿನಗರ, ಶಿರಾ ಇವರ ಷೆಡ್ಯೂಲ್‌ನಲ್ಲಿ ವಿವರಿಸಲಾದ ಸ್ಥಿರಾಸ್ತಿಗಳನ್ನು ದಿನಾಂಕ:16–07–2010 ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್ಡುದಾರರಾದ ಜಿ. ನರಸಿಂಹಯ್ಯ ಬಿನ್ ಗುಡ್ಡಪ್ಪ, ಬಾಲಾಜಿ ನಗರ, ಶಿರಾ ಟೌನ್ ಇವರ ಹೆಸರಿಗೆ ಸ್ಥಿರೀಕರಿಸಿ ಆದೇಶಿಸಿದೆ.

ಬಹಿರಂಗ ಹರಾಜಿನಲ್ಲಿ ಬಿಡ್ಡುದಾರ ಜಿ.ನರಸಿಂಹಯ್ಯ ಬಿನ್ ಗುಡ್ಡಪ್ಪ, ಬಾಲಾಜಿನಗರ, ಶಿರಾ ಇವರು ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಪಾವತಿಸಿದ ರೂ. 1,02,000=00 ಗಳಲ್ಲಿ ಡಿಕ್ರಿ ಹೋಲ್ಡರ್ ಬ್ಯಾಂಕ್ ಮಾರಾಟದ ಘೋಷಣೆಯಲ್ಲಿ ಯಾವ ಮೊಬಲಗಿನ ವಸೂಲಿಯ ಸಲುವಾಗಿ ಮಾರಾಟವು ಆದೇಶ ಮಾಡಲ್ಪಟ್ಟಿತೋ ಆ ಮೊಬಲಗನ್ನು ಮತ್ತು ಅದರ ಮೇಲಿನ ಬಡ್ಡಿ ಮತ್ತು ಜಪ್ತಿ ವೆಚ್ಚಗಳನ್ನು ತೀರ್ಪುಋಣಿ ಎಸ್.ಪಿ. ರಾಜೇಂದ್ರ ಬಿನ್ ಎಂ.ಆರ್. ಪಾಂಡುರಂಗಯ್ಯ, ಬನ್ನಿನಗರ, ಶಿರಾ ಇವರ ಸಾಲದ ಖಾತೆಗೆ ಜಮಾ ತೆಗೆದುಕೊಂಡು ಲೆಕ್ಕ ಮಾಡಿಕೊಳ್ಳಲು ಪ್ರಧಾನ ವ್ಯವಸ್ಥಾಪಕರಿಗೆ ಆದೇಶಿಸಿದೆ.

**ಸ್ಥಿರ ಸ್ವತ್ತುಗಳ ವಿವರ**

ಶಿರಾ ಟೌನ್ ಬೋವಿಕಾಲೋನಿ ಅಸೆಸ್‌ಮೆಂಟ್ ನಂ.1087/1037/1030 ವಿಸ್ತೀರ್ಣ 25 x 20 ಅಡಿಗಳುಳ್ಳ ನಿವೇಶನಕ್ಕೆ ಚಕ್ ಬಂದಿ ಪೂರ್ವಕ್ಕೆ : 15 ಅಡಿ ರಸ್ತೆ ಪಶ್ಚಿಮಕ್ಕೆ ಎಸ್.ಟಿ. ಹನುಮಂತಪ್ಪನ 105ನೇ ನಂಬರಿನ ನಿವೇಶನ, ಉತ್ತರಕ್ಕೆ : ರಂಗಜ್ಜನ 103ನೇ ನಂಬರಿನ ನಿವೇಶನ ದಕ್ಷಿಣಕ್ಕೆ: ರಂಗಣ್ಣನ 101ನೇ ನಂಬರಿನ ನಿವೇಶನ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಚೇರಿ ಮೊಹರಿನೊಂದಿಗೆ ಈ ದಿನ ದಿನಾಂಕ: – 2–2011 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಮಧುಗಿರಿ ಉಪ–ವಿಭಾಗ, ಮಧುಗಿರಿ

ಪಿಆರ್–416

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪ ವಿಭಾಗ ಮಧುಗಿರಿ ಇವರ ಕಚೇರಿ ನಡವಳಿಕೆಗಳು**

**ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38(7) ರ ನ್ವಯ ನೀಡಿದ ಮಾರಾಟ ದೃಢೀಕರಣ ಪತ್ರ**

**ಅಮಲ್ಜಾರಿ ಅರ್ಜಿ ಸಂಖ್ಯೆ:60/2002–03**

**ಉಪಸ್ಥಿತರು :** ಹೆಚ್.ಡಿ. ಶಿವಣ್ಣ
ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಮಧುಗಿರಿ ಉಪ ವಿಭಾಗ ಮಧುಗಿರಿ

**ಡಿಕ್ರಿ ಹೋಲ್ಡರ್**
ವ್ಯವಸ್ಥಾಪಕರು
ದಿ ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ, ಶಿರಾ ತುಮಕೂರು ಜಿಲ್ಲೆ.

**ತೀರ್ಮಖಣಿ:**
ಕೆ.ಆರ್. ಜಗದೀಶ್ ಬಿನ್ ಲೇಟ್ ಕೆ.ಎನ್. ರಂಗನಾಥ ಶೆಟ್ಟಿ
ಮಹಾಲಕ್ಷ್ಮಿ ಸ್ಟೋರ್, ಮುಖ್ಯ ರಸ್ತೆ, ಶಿರಾ

ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ, ಶಿರಾ. ತುಮಕೂರು ಜಿಲ್ಲೆ ಇವರು ದಿನಾಂಕ:13–02–1997 ರಂದು ಪಡೆದ ಡಿಕ್ರಿ ನಂ.840/96–97 ರ ಪ್ರಕಾರ ದಿನಾಂಕ:6–5–2002 ರಂದು ಸಿ.ಇ.ಪಿ.ನಂ.60/2002–03 ರ ಪ್ರಕಾರ ಅಮಲ್ಜಾರಿ ಪಡೆದು ಡಿಕ್ರಿ ಹೋಲ್ಡರ್ ಬ್ಯಾಂಕಿನ ಮಾರಾಟಾಧಿಕಾರಿಯು ಮೇಲ್ಕಂಡ ತೀರ್ಮಖಣಿದಾರರಾದ ಕೆ.ಆರ್. ಜಗದೀಶ್ ಬಿನ್ ಲೇಟ್ ಕೆ.ಎನ್.ರಂಗನಾಥ ಶೆಟ್ಟಿ, ಮಹಾಲಕ್ಷ್ಮಿ ಸ್ಟೋರ್, ಮುಖ್ಯ ರಸ್ತೆ, ಶಿರಾ ಟೌನ್ ಇವರು ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಆಧಾರ ಮಾಡಿದ್ದ ಈ ಕೆಳಕಂಡ ಸ್ಥಿರಾಸ್ತಿಯನ್ನು ದಿನಾಂಕ:23–12–2010 ರಂದು ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ. ಶಿರಾ ಈ ಬ್ಯಾಂಕಿಗೆ ಬರಬೇಕಾದ ಸುಸ್ತಿ ಸಾಲದ ವಸೂಲಿ ಬಗ್ಗೆ ಬಹಿರಂಗ ಹರಾಜು ನಡೆಸಿರುತ್ತಾರೆ.

ಈ ಬಹಿರಂಗ ಹರಾಜಿನಲ್ಲಿ ತೀರ್ಮಖಣಿಯ ಸ್ಥಿರ ಸ್ವತ್ತನ್ನು ಅಂಕುಶ್, ಎಸ್.ಎಂ. ಬಿನ್.ಎಸ್.ಎ. ಮುರಳಿಧರ, ಅಂಬೇಡ್ಕರ್ ರಸ್ತೆ, ಶಿರಾ ಟೌನ್, ತುಮಕೂರು ಜಿಲ್ಲೆ ಇವರು ರೂ.166000=00 ಗಳಿಗೆ ಅತಿ ಹೆಚ್ಚಿನ ಬಿಡ್ ಮೊತ್ತಕ್ಕೆ ಕೊಂಡಿರುತ್ತಾರೆ ಎಂದು ಈ ಮೂಲಕ ದೃಢೀಕರಿಸಿದೆ. ಆದ್ದರಿಂದ ಈ ಸ್ಥಿರಾಸ್ತಿಯ ಹರಾಜನ್ನು ಬಿಡ್ ದಾರರಾದ ಎಸ್.ಎಂ.ಅಂಕುಶ್ ಬಿನ್ ಎಸ್.ಎ.ಮುರಳೀಧರ ಇವರ ಹೆಸರಿಗೆ ಸ್ಥಿರೀಕರಣಗೊಳಿಸಿದೆ.

**ಸ್ಥಿರಾಸ್ತಿಯ ವಿವರ**

| ಕ್ರ.ಸಂ | ಗ್ರಾಮ ಮತ್ತು ತಾಲ್ಲೂಕು | ಸ್ಥಿರ ಸ್ವತ್ತುಗಳ ವಿವರ ತರಹೆ | ಖಾನೇಷು ಮಾರಿ ನಂ. | ಖಾತೆದಾರನ ಹೆಸರು | ವಿಸ್ತೀರ್ಣ | ಚಕ್ಕುಬಂದಿ |
|---|---|---|---|---|---|---|
| 1 | ಮಂಜುನಾಥ ನಗರ ಶಿರಾ ಟೌನ್ | 43 | 7841 | ಕೆ.ಆರ್. ಜಗದೀಶ್ ಬಿನ್ ಲೇ//ಕೆ.ಎನ್. ರಂಗನಾಥಶೆಟ್ಟಿ ಮಹಾಲಕ್ಷ್ಮೀ ಸ್ಟೋರ್ ಮುಖ್ಯ ರಸ್ತೆ ಶಿರಾ | 30 X 40 ಅಡಿಗಳು | ಪೂರ್ವಕ್ಕೆ: ರಸ್ತೆ<br>ಪಶ್ಚಿಮಕ್ಕೆ:ಸೈಟ್ ಸಂ36<br>ಉತ್ತರಕ್ಕೆ :ರಾಜೇಶ್ವರಿ ರವರ ಸೈಟು<br>ದಕ್ಷಿಣಕ್ಕೆ:ಲಿಂಗಪ್ಪ ರವರ ಸೈಟು |

ಮಾರಾಟದ ಮೊತ್ತ ರೂ, 166000=00
ಮಾರಾಟದ ದಿನಾಂಕ: 23–12–2010
ನಿಗದಿತ ಮುದ್ರಾಂಕ ಶುಲ್ಕ ರೂ 11155=00

ಈ ಆದೇಶವನ್ನು ನನ್ನ ಸಹಿ ಹಾಗೂ ಕಚೇರಿ ಮೊಹರಿನೊಂದಿಗೆ ಈ ದಿನ ದಿನಾಂಕ: 10–2–2011 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಮಧುಗಿರಿ ಉಪ–ವಿಭಾಗ, ಮಧುಗಿರಿ

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪ ವಿಭಾಗ ಮಧುಗಿರಿ ಇವರ ಕಚೇರಿ ನಡವಳಿಕೆಗಳು

| **ಡಿಕ್ರಿ ಹೋಲ್ಡರ್** | **ತೀರ್ಪುಋಣಿ:** |
|---|---|
| ವ್ಯವಸ್ಥಾಪಕರು | ಕೆ.ಆರ್. ಜಗದೀಶ್ ಬಿನ್ ಲೇಟ್ ಕೆ.ಎನ್. ರಂಗನಾಥ ಶೆಟ್ಟಿ |
| ದಿ ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ, ಶಿರಾ ತುಮಕೂರು ಜಿಲ್ಲೆ | ಮಹಾಲಕ್ಷ್ಮಿ ಸ್ಟೋರ್, ಮುಖ್ಯ ರಸ್ತೆ, ಶಿರಾ |

**ಪ್ರಸ್ತಾವನೆ:**

ಮಾರಾಟಾಧಿಕಾರಿ, ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ, ಶಿರಾ ತುಮಕೂರು ಜಿಲ್ಲೆ, ಇವರು ತೀರ್ಪು ಋಣಿಯಿಂದ ವಸೂಲಾಗಬೇಕಾದ ಆಧಾರ ಸಾಲ ರೂ.48,613=00 ದಾವ ಶುಲ್ಕ ರೂ. 165=00 ಮತ್ತು ಮುಂದುವರೆದ ಬಡ್ಡಿ ಇತರೆ ಖರ್ಚುಗಳಿಗೆ ಡಿಕ್ರಿ ಪಡೆದು ಅಮಲ್ಜಾರಿಗೆ ಅರ್ಜಿ ಹಾಕಿದ್ದು ಸದರಿ ಅಮಲ್ಜಾರಿ ಅರ್ಜಿ ಸಂಖ್ಯೆ 60/2002–2003 ಮೊಬಲಗು ರೂ.1,08,150=00 ರ ಪ್ರಕರಣಗಳನ್ನು ಸದರಿ ಬ್ಯಾಂಕಿನ ನಿಯಮ 441 ಮಾರಾಟಾಧಿಕಾರಿಯವರಿಗೆ ಅಮಲ್ಜಾರಿಗೆ ವಹಿಸಲಾಗಿತ್ತು. ಈಗ ದಿನಾಂಕ:23–12–2010 ಕ್ಕೆ ರೂ.2,97,459–00 ಡಿಕ್ರಿಹೋಲ್ಡರ್ ಬ್ಯಾಂಕಿಗೆ ತೀರ್ಪುಋಣಿ ದಾರರಿಂದ ಬರಬೇಕಾಗಿರುವ ಬಾಕಿ ವಸೂಲಿಗಾಗಿ ಮಾರಾಟಾಧಿಕಾರಿಗಳು ತೀರ್ಪುಋಣಿಯ ಸ್ಥಿರಸ್ವತ್ತುಗಳನ್ನು ದಿನಾಂಕ:23–12–2010 ರಂದು ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್‌ದಾರರಾದ ಶ್ರೀ ಅಂಕುಶ್, ಎಸ್.ಎಂ. ಬಿನ್ ಎಸ್.ಎ. ಮುರಳೀಧರ, ಅಂಬೇಡ್ಕರ್ ರಸ್ತೆ, ಶಿರಾ ಇವರ ಹೆಸರಿಗೆ ನಿವೇಶನವನ್ನು ರೂ.1,66,000=00 (ಒಂದು ಲಕ್ಷ ಅರವತ್ತಾರು ಸಾವಿರ ರೂ.ಗಳು ಮಾತ್ರ) ಗಳಿಗೆ ಹರಾಜು ನಿಲ್ಲಿಸಿ ಹರಾಜು ಸ್ಥಿರೀಕರಣಕ್ಕಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಸ್ವತ್ತು ಹರಾಜಾದ 30 ದಿವಸಗಳೊಳಗೆ ಆಸ್ತಿಯ ಒಡೆತನವನ್ನು ಹೊಂದಿರುವ ಅಥವಾ ಆಸ್ತಿಯ ಹಿತಾಸಕ್ತಿ ಹೊಂದಿರುವ ವ್ಯಕ್ತಿಗಳಿಂದ ಸಹಕಾರಿ ಕಾಯ್ದೆ ನಿಯಮ 38 (4) (ಎ) ರೀತ್ಯ ನಿಯಮಾನುಸಾರ ಠೇವಣಿಮಾಡಿ ಮಾರಾಟವನ್ನು ರದ್ದುಗೊಳಿಸುವಂತೆ ಕೋರಿ ಯಾವ ವಿಧವಾದ ಅರ್ಜಿಯೂ ಬಂದಿಲ್ಲದ ಪ್ರಯುಕ್ತ ಸದರಿ ಷೆಡ್ಯೂಲ್‌ನಲ್ಲಿನ ಸ್ಥಿರಾಸ್ತಿಯನ್ನು ಅತ್ಯಧಿಕ ಹಾಗೂ ಅಂತಿಮ ಬಿಡ್ಡುದಾರರ ಹೆಸರಿಗೆ ಸ್ಥಿರೀಕರಣಗೊಳಿಸಬೇಕಾಗಿದೆ. ಆದುದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

### ಆದೇಶ

**ನಂ.ಸ.ನಿ.33/ಎ.ಬಿ.ಎನ್/ಎಸ್.ಸಿ/ /2010–2011, ದಿನಾಂಕ: 10–2–2011**

ಹೆಚ್.ಡಿ.ಶಿವಣ್ಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪ ವಿಭಾಗ ಮಧುಗಿರಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಬಂಧನೆಗಳು 1960 ರ ನಿಯಮ 38(6)(ಎ) ಪ್ರಕಾರ ನನಗೆ ದತ್ತವಾಗಿರುವ ಅಧಿಕಾರದ ಮೇರೆಗೆ ಶಿರಾ ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ ಶಿರಾ ಇವರಿಗೆ ತೀರ್ಪುಋಣಿಗಳಾದ ಕೆ.ಆರ್. ಜಗದೀಶ್ ಬಿನ್ ಕೆ.ಎನ್. ರಂಗನಾಥ ಶೆಟ್ಟಿ ಮಹಾಲಕ್ಷ್ಮಿ ಸ್ಟೋರ್, ಮುಖ್ಯ ರಸ್ತೆ, ಶಿರಾ ಟೌನ್ ಇವರ ಷೆಡ್ಯೂಲ್‌ನಲ್ಲಿ ವಿವರಿಸಲಾದ ಸ್ಥಿರಾಸ್ತಿಗಳನ್ನು ದಿನಾಂಕ:23–12–2010 ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್ಡುದಾರರಾದ ಅಂಕುಶ್,ಎಸ್.ಎಂ. ಬಿನ್ ಎಸ್.ಎ.ಮುರಳೀಧರ ಅಂಬೇಡ್ಕರ್ ರೋಡ್ ಶಿರಾ ಇವರ ಹೆಸರಿಗೆ ಸ್ಥಿರೀಕರಿಸಿ ಆದೇಶಿಸಿದೆ.

ಬಹಿರಂಗ ಹರಾಜಿನಲ್ಲಿ ಬಿಡ್ಡುದಾರ ಅಂಕುಶ್,ಎಸ್.ಎಂ. ಬಿನ್ ಎಸ್.ಎ.ಮುರಳೀಧರ ಅಂಬೇಡ್ಕರ್ ರೋಡ್ ಶಿರಾ ಇವರು ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಪಾವತಿಸಿದ ರೂ. 1,66,000=00 ಗಳಲ್ಲಿ ಡಿಕ್ರಿ ಹೋಲ್ಡರ್ ಬ್ಯಾಂಕ್ ಮಾರಾಟದ ಘೋಷಣೆಯಲ್ಲಿ ಯಾವ ಮೊಬಲಗಿನ ವಸೂಲಿಯ ಸಲುವಾಗಿ ಮಾರಾಟವು ಆದೇಶ ಮಾಡಲ್ಪಟ್ಟಿತೋ ಆ ಮೊಬಲಗನ್ನು ಮತ್ತು ಅದರ ಮೇಲಿನ ಬಡ್ಡಿ ಮತ್ತು ಜಪ್ತಿ ವೆಚ್ಚಗಳನ್ನು ತೀರ್ಪುಋಣಿ ಕೆ.ಆರ್. ಜಗದೀಶ್ ಬಿನ್ ಲೇಟ್ ಕೆ.ಎನ್. ರಂಗನಾಥ ಶೆಟ್ಟಿ ಮಹಾಲಕ್ಷ್ಮಿ ಸ್ಟೋರ್ ಇವರ ಸಾಲದ ಖಾತೆಗೆ ಜಮಾ ತೆಗೆದುಕೊಂಡು ಲೆಕ್ಕ ಮಾಡಿಕೊಳ್ಳಲು ಪ್ರಧಾನ ವ್ಯವಸ್ಥಾಪಕರಿಗೆ ಆದೇಶಿಸಿದೆ.

### ಸ್ಥಿರ ಸ್ವತ್ತುಗಳ ವಿವರ

ಶಿರಾ ಟೌನ್ ಮಂಜುನಾಥನಗರ ಅಸೆಸ್‌ಮೆಂಟ್ ನಂ.7841 ನಿವೇಶನದ ನಂ.43 ಅಳತೆ ಪೂರ್ವ, ಪಶ್ಚಿಮಕ್ಕೆ 30 ಅಡಿ ಉತ್ತರ, ದಕ್ಷಿಣ 40 ಅಡಿ ವಿಸ್ತೀರ್ಣದ ನಿವೇಶನಕ್ಕೆ ಚೆಕ್ಕು ಬಂದಿ ಪೂರ್ವಕ್ಕೆ:ರಸ್ತೆ ಪಶ್ಚಿಮಕ್ಕೆ: ಸೈಟ್ ಸಂ 36 ಉತ್ತರಕ್ಕೆ: ರಾಜೇಶ್ವರಿ ರವರ ಸೈಟು ದಕ್ಷಿಣಕ್ಕೆ : ಲಿಂಗಪ್ಪ ರವರ ಸೈಟು

ಈ ಆದೇಶವನ್ನು ನನ್ನ ಸಹಿ ಹಾಗೂ ಕಚೇರಿ ಮೊಹರಿನೊಂದಿಗೆ ಈ ದಿನ ದಿನಾಂಕ: 10–02–2011 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು

ಪಿಆರ್–417 ಮಧುಗಿರಿ ಉಪ–ವಿಭಾಗ, ಮಧುಗಿರಿ

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರವರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

**ನಂ.ಡಿಆರ್‌ಬಿ/ಆರ್./ನೋಂದಣಿ ರದ್ಧತಿ/44/2009–2010, ದಿನಾಂಕ:26ನೇ ಮಾರ್ಚ್ 2011**

**ವಿಷಯ:** ಸಮಾಪನೆಗೊಂಡ ದಾಸರಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಹೊಸಕೋಟೆ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಉಪ ನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರ ಆದೇಶ ಸಂ.ಡಿಆರ್‌ಬಿ/ಆರ್/ನೋಂದಣಿ ರದ್ಧತಿ/44/2009–10, ದಿನಾಂಕ:17–02–2010

" ತಿದ್ದುಪಡಿ ಆದೇಶ "

ಉಲ್ಲೇಖಿತ ಆದೇಶದಲ್ಲಿ ದಾಸರಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಹೊಸಕೋಟೆ ತಾಲ್ಲೂಕು ಇದರ ನೋಂದಣಿ ಸಂಖ್ಯೆ ನಮೂದಿಸಿರುವುದನ್ನು " ನೋಂದಣಿ ಸಂಖ್ಯೆ ಡಿ/ಆರ್‌ಜಿಎನ್–12334/ಸಿ557/63 " ಎಂಬುದಾಗಿ ತಿದ್ದಿ ಓದಿಕೊಳ್ಳುವುದು.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:26–03–2011 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು
ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

ಪಿಆರ್–418

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ಕಛೇರಿ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು–560 018.**

**ಸಂ:ಜೆಆರ್‌ಬಿ:ಸಮಾಪನೆ:156:2009–10, ದಿನಾಂಕ:31ನೇ ಮಾರ್ಚ್ 2011**

**ವಿಷಯ:** ಸ್ಥಗಿತಗೊಂಡಿರುವ ಸೊರಬ ತಾಲ್ಲೂಕು ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದವರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಸೊರಬ, ಇದನ್ನು ಸಮಾಪನೆಗೊಳಿಸಿರುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ಪತ್ರದ ಸಂಖ್ಯೆ:ಡಿಆರ್‌ಎಸ್/ಎಲ್‌ಕ್ಯೂಡಿ/ಡಿಎಲ್‌ಎಸ್/503/2005–06, ದಿನಾಂಕ:21–03–2006.

2) ಈ ಕಛೇರಿಯ ಸಮಸಂಖ್ಯೆಯ ಪತ್ರದ ದಿನಾಂಕ:07–11–10.

3) ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಇವರ ಅರೆ ಸರ್ಕಾರಿ ಪತ್ರದ ಸಂಖ್ಯೆ:ಡಿಆರ್‌ಎಸ್/ಎಲ್‌ಕ್ಯೂಡಿ/ಡಿಎಲ್‌ಎಸ್/503/2005–06, ದಿನಾಂಕ:05–10–2010.

4) ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ಪತ್ರದ ಸಂಖ್ಯೆ:ಡಿಆರ್‌ಎಸ್/ಎಲ್‌ಕ್ಯೂಡಿ/ಡಿಎಲ್‌ಎಸ್/503/2005–06, 1737, ದಿನಾಂಕ:05–02–2011.

**ಪ್ರಸ್ತಾವನೆ:**

ಸಮಾಪನೆಯಲ್ಲಿರುವ ಸೊರಬ ತಾಲ್ಲೂಕು ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದವರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಸೊರಬ, ಈ ಸಂಘದಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನೆ ಇಲ್ಲದೇ ಇರುವುದರಿಂದ ಸಮಾಪನೆಗೊಳಿಸಲಾಗಿತ್ತು. ಅದರಂತೆ, ಸಮಾಪನಾಧಿಕಾರಿಗಳು ಸಮಾಪನಾ ನಡವಳಿಗಳನ್ನು ಪೂರ್ಣಗೊಳಿಸಿ ಸಂಘದ ನೊಂದಣಿ ರದ್ಧತಿಗೆ ಉಲ್ಲೇಖ (1) ರಲ್ಲಿ ಪ್ರಸ್ತಾವೆಯಲ್ಲಿ ಸಲ್ಲಿಸಿರುತ್ತಾರೆ. ಈ ಬಗ್ಗೆ ಉಲ್ಲೇಖ (2) ರ ಈ ಕಛೇರಿಯ ಪತ್ರದಲ್ಲಿ ಸಂಘದಲ್ಲಿ ಸರ್ಕಾರಿ ಷೇರು ಮತ್ತು ಸಾಲಗಳ ಮಾಹಿತಿಯನ್ನು ಕೋರಲಾಗಿ, ಉಲ್ಲೇಖ (4) ರಲ್ಲಿ ಸಹಕಾರ ಸಂಘಗಳ ಉಪನಿಬಂಧಕರು, ಸಂಘದಲ್ಲಿ ಸರ್ಕಾರದ ಷೇರು ರೂ.2,700–00 ಮತ್ತು ಸರ್ಕಾರದ ಸಾಲ ರೂ.1,00,500–00ಗಳನ್ನು ಸರ್ಕಾರದ ಆದೇಶ ಸಂಖ್ಯೆ:ಸಿಎಂಡಬ್ಲ್ಯೂ/35/ಸಿಹೆಚ್‌ಎಸ್/1988, ದಿನಾಂಕ:03–11–1989 ರಲ್ಲಿ ಮನ್ನಾ ಮಾಡಿದ್ದು, ಸದರಿ ಮನ್ನಾ ಆದೇಶದ ಪ್ರತಿಯು ಲಭ್ಯವಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಸದರಿ ಸರ್ಕಾರದ ಸಾಲ ಮತ್ತು ಷೇರು ಮೊತ್ತವನ್ನು ಕರ್ನಾಟಕ ರಾಜ್ಯ ಪರಿಶಿಷ್ಟ ಜಾತಿ ಪಂಗಡದ ಸಹಕಾರ ಗೃಹ ನಿರ್ಮಾಣ ನಿಗಮ ನಿಯಮಿತ, ಬೆಂಗಳೂರು, ಇವರು ಸೊರಬ ತಾಲ್ಲೂಕು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಸೊರಬ, ಈ ಸಂಘದಿಂದ ನಿಗಮಕ್ಕೆ ಬರಬೇಕಾದ ಸಾಲ ರೂ.1,00,500–00 ಮತ್ತು ಷೇರು ರೂ.2,700–00 ಗಳನ್ನು ಮೇಲ್ಕಂಡ ಸರ್ಕಾರದ ಆದೇಶದಂತೆ ಮನ್ನಾ ಆಗಿರುವ ಬಗ್ಗೆ ಸಂಘದಿಂದ ನಿಗಮಕ್ಕೆ ಜಮಾ ಆದ ಬಗ್ಗೆ ರಸೀತಿಯನ್ನು ನೀಡಿರುತ್ತಾರೆ. ಆದುದರಿಂದ ಮೇಲ್ಕಂಡ ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಪಡಿಸುವಂತೆ ಸಹಕಾರ ಸಂಘಗಳ ಉಪ ನಿಬಂಧಕರು ಕೋರಿರುತ್ತಾರೆ.

ಮೇಲಿನ ಕಾರಣಗಳಿಂದ ಹಾಗೂ ಉಪ ನಿಬಂಧಕರ ವರದಿಯ ಮೇರೆಗೆ ಸದರಿ ಸಂಘವನ್ನು ಮುಂದುವರೆಸುವುದು ಸೂಕ್ತವಲ್ಲವೆಂದು ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂ:ಸಿಓ/139/ಸಿಎಲ್‌ಎಂ/2010, ದಿನಾಂಕ:17–02–2011 ರಲ್ಲಿ ದತ್ತವಾಗಿರುವ ಅಧಿಕಾರದನ್ವಯ ಸಿ.ಎಸ್.ವೀರೇಶ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಆದ ನಾನು ಸಮಾಪನೆಯಲ್ಲಿರುವ ಸೊರಬ ತಾಲ್ಲೂಕು ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದವರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಈ ಸಂಘದ ನೊಂದಣಿ ಸಂಖ್ಯೆ:856/63–64, ದಿನಾಂಕ:27–01–1964 ನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿರುತ್ತೇನೆ. ಈ ದಿನದಿಂದ ಸದರಿ ಸಂಘವು ಅಸ್ತಿತ್ವವನ್ನು ಕಳೆದುಕೊಂಡಿರುತ್ತದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ದಿನಾಂಕ:31–03–11 ರಂದು ನೀಡಿರುತ್ತೇನೆ.

**ಸಿ.ಎಸ್.ವೀರೇಶ್**
ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು
ಬೆಂಗಳೂರು ಪ್ರಾಂತ, ಬೆಂಗಳೂರು

ಪಿಆರ್–452

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ಕಛೇರಿ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-560 018.**

**ಸಂ:ಜೆಆರ್‌ಬಿ:ಸಮಾಪನೆ/2140/2002-03, ದಿನಾಂಕ:31ನೇ ಮಾರ್ಚ್ 2011**

**ವಿಷಯ:** ಸಮಾಪನೆಯಲ್ಲಿರುವ ಸಾಗರ ತಾಲ್ಲೂಕು ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದವರ ವಿವಿದೋದ್ದೇಶ ಸಹಕಾರ ಸಂಘ ನಿ., ಸಾಗರ, ಇದರ ನೊಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ಪತ್ರದ ಸಂಖ್ಯೆ:ಡಿಆರ್‌ಎಸ್/ಕಾನೂನು/03/ಡಿಎಲ್‌ಎಸ್/40/2002-03, ದಿನಾಂಕ:25-11-2002.

2) ಈ ಕಛೇರಿಯ ಆದೇಶದ ಸಂಖ್ಯೆ:ಜೆಆರ್‌ಹೆಚ್/ಸಮಾಪನೆ/2140/2002-03, ದಿನಾಂಕ:31-12-2002.

3) ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಇವರ ಪತ್ರದ ಸಂಖ್ಯೆ:ಡಿಆರ್‌ಎಸ್/ಎಲ್‌ಕ್ಯೂಡಿ/ಡಿಎಲ್‌ಎಸ್/40/2002-03, ದಿನಾಂಕ: -01-2011.

**ಪ್ರಸ್ತಾವನೆ:**

ಸಾಗರ ತಾಲ್ಲೂಕು ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದವರ ವಿವಿದೋದ್ದೇಶ ಸಹಕಾರ ಸಂಘ ನಿ., ಸಾಗರ ಈ ಸಂಘವು ನೊಂದಣಿ ಸಂಖ್ಯೆ:20451/94-95, ದಿನಾಂಕ:09-11-1994 ರಂದು ನೊಂದಣಿಯಾಗಿದ್ದು, ತಾಲ್ಲೂಕುಮಟ್ಟದ ಸಂಘವಾಗಿರುತ್ತದೆ. ಈ ಸಂಘವು ನೊಂದಣಿಯಾದ ಸ್ವಲ್ಪ ವರ್ಷಗಳ ಕಾಲ ಕೆಲಸ ಮಾಡಿ ನಂತರ ಯಾವುದೇ ವ್ಯವಹಾರವನ್ನು ನಿರ್ವಹಿಸದೇ ಸಂಪೂರ್ಣವಾಗಿ ಸ್ಥಗಿತಗೊಂಡಿದ್ದು, ಸಂಘದ ಲೆಕ್ಕಪರಿಶೋಧನೆಯನ್ನು ಮಾಡಿಸದೆ ಸಂಘದ ಉಪನಿಯಮಗಳ ಉದ್ದೇಶದಂತೆ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ಕಾರ್ಯನಿರ್ವಹಿಸದೆ ಸಂಘದ ಸದಸ್ಯರ ಆರ್ಥಿಕ ಹಿತಸಾಧನೆಗೆ ನೆರವಾಗುವಲ್ಲಿ ವಿಫಲವಾಗಿರುತ್ತದೆ. ಸಂಘದ ಆಡಳಿತ ಮಂಡಳಿಯು ಸಂಪೂರ್ಣ ನಿಷ್ಕ್ರಿಯವಾಗಿದ್ದು, ಸಂಘದ ಅಭಿವೃದ್ಧಿಗೆ ಯಾವುದೇ ಕಾರ್ಯಕ್ರಮಗಳನ್ನು ಹಾಕಿಕೊಂಡಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವುದೇ ಪ್ರಯೋಜನೆ ಇಲ್ಲದಿರುವುದನ್ನು ಮನಗಂಡು ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಇವರು ಉಲ್ಲೇಖ(1)ರಲ್ಲಿ ಶಿಫಾರಸ್ಸು ಮಾಡಿದಂತೆ, ಉಲ್ಲೇಖ (2) ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಲಾಗಿರುತ್ತದೆ. ಉಲ್ಲೇಖ (3)ರ ಪತ್ರದಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ಸಂಘದ ನೊಂದಣಿಯನ್ನು ರದ್ದುಗೊಳಿಸುವಂತೆ ಕೋರಿ ಶಿಫಾರಸ್ಸು ಮಾಡಿರುತ್ತಾರೆ.

ಸಂಘದ ಸದಸ್ಯರಿಗೆ ಸಂಘವನ್ನು ಮುನ್ನಡೆಸಿಕೊಂಡು ಹೋಗಲು ಆಸಕ್ತಿ ಇಲ್ಲದ ಕಾರಣ, ಸಮಾಪನಾಧಿಕಾರಿಗಳು ಅಂತಿಮ ಸಭೆ ನಡೆಸಿ, ಸಂಘದಲ್ಲಿ ಸರ್ಕಾರದ ಷೇರು ಮತ್ತು ಸಾಲಗಳು ಇರುವುದಿಲ್ಲ. ಆಸ್ತಿ-ಜವಾಬ್ದಾರಿ ತ:ಖ್ತೆ ಶೂನ್ಯವಾಗಿರುವುದರಿಂದ ಸಂಘದ ನೊಂದಣಿಯನ್ನು ರದ್ದುಪಡಿಸುವಂತೆ ಸಮಾಪನಾಧಿಕಾರಿಗಳು ಕೋರಿರುವುದಾಗಿ ಉಪ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಕಾರಣಗಳಿಂದ ಹಾಗೂ ಉಪ ನಿಬಂಧಕರ ವರದಿಯ ಮೇರೆಗೆ ಸದರಿ ಸಂಘವನ್ನು ಮುಂದುವರೆಸುವುದು ಸೂಕ್ತವಲ್ಲವೆಂದು ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂ:ಸಿಓ/139/ಸಿಎಲ್‌ಎಂ/2010, ದಿನಾಂಕ:17-02-2011 ರಲ್ಲಿ ದತ್ತವಾಗಿರುವ ಅಧಿಕಾರದನ್ವಯ ಸಿ.ಎಸ್.ವೀರೇಶ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಆದ ನಾನು ಸಮಾಪನೆಯಲ್ಲಿರುವ ಸಾಗರ ತಾಲ್ಲೂಕು ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದವರ ವಿವಿದೋದ್ದೇಶ ಸಹಕಾರ ಸಂಘ ನಿ., ಸಾಗರ, ಇದರ ನೊಂದಣಿ ಸಂಖ್ಯೆ:20451/94-95, ದಿನಾಂಕ:09-11-1994 ನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿರುತ್ತೇನೆ. ಈ ದಿನದಿಂದ ಸದರಿ ಸಂಘವು ಅಸ್ತಿತ್ವವನ್ನು ಕಳೆದುಕೊಂಡಿರುತ್ತದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ದಿನಾಂಕ:31-03-11 ರಂದು ನೀಡಿರುತ್ತೇನೆ.

**ಸಿ.ಎಸ್.ವೀರೇಶ್**

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು

ಬೆಂಗಳೂರು ಪ್ರಾಂತ, ಬೆಂಗಳೂರು

ಪಿಆರ್-453

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ಕಛೇರಿ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-560 018.**

**ಸಂ:ಜೆಆರ್‌ಬಿ:ಸಮಾಪನೆ/18/90/1998-99, ದಿನಾಂಕ:31ನೇ ಮಾರ್ಚ್ 2011**

**ವಿಷಯ:** ಸಮಾಪನೆಯಲ್ಲಿರುವ ಮೊಳಕಾಲ್ಮೂರು ತಾಲ್ಲೂಕು ಸಣ್ಣ ಮತ್ತು ಅತಿ ಸಣ್ಣ ರೈತರ ಸಾಮುದಾಯಿಕ ಬೇಸಾಯ ಸಹಕಾರ ಸಂಘ ನಿಯಮಿತ, ಚಿತ್ರದುರ್ಗ ಇದರ ನೊಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಇವರ ಪತ್ರದ ಸಂಖ್ಯೆ:ಡಿಆರ್‌ಡಿ/ಎಲ್‌ಕ್ಯೂಡಿ/ಸಿಆರ್-44/97-98, ದಿನಾಂಕ:30-05-1998.

2) ಈ ಕಛೇರಿಯ ಆದೇಶದ ಸಂಖ್ಯೆ:ಜೆಆರ್‌ಬಿ/ಸಮಾಪನೆ/18/1998–99, ದಿನಾಂಕ:14–09–98.

3) ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಇವರ ಪತ್ರದ ಸಂಖ್ಯೆ:ಡಿಆರ್‌ಡಿ/ಸಮಾಪನೆ/ರದ್ಧತಿ/ಸಿಆರ್–18/98–99, ದಿನಾಂಕ: 19–03–2011.

**ಪ್ರಸ್ತಾವನೆ:**

ಮೊಳಕಾಲ್ಮೂರು ತಾಲ್ಲೂಕು ಸಣ್ಣ ಮತ್ತು ಅತಿ ಸಣ್ಣ ರೈತರ ಸಾಮುದಾಯಿಕ ಬೇಸಾಯ ಸಹಕಾರ ಸಂಘ ನಿಯಮಿತ, ಚಿತ್ರದುರ್ಗ ಜಿಲ್ಲೆ ಈ ಸಂಘವು ನೊಂದಣಿ ಸಂಖ್ಯೆ:ಡಿಆರ್‌ಸಿಎಸ್/ಆರ್‌ಜಿಎಸ್/ಎಲ್‌ಪಿಸಿ/7089/1981–82, ದಿನಾಂಕ:26–02–1982 ರಲ್ಲಿ ನೊಂದಣಿಯಾಗಿರುತ್ತದೆ. ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟದ್ದಾಗಿದ್ದು, ಸಂಘವು ಸರಿಯಾಗಿ ಕೆಲಸ ನಿರ್ವಹಿಸದೆ ಸ್ಥಗಿತಗೊಂಡಿರುವ ಕಾರಣ, ಸಂಘವನ್ನು ಉಲ್ಲೇಖ (1) ರ ಪತ್ರದ ಮೇರೆಗೆ ಉಲ್ಲೇಖ (2) ರ ಆದೇಶದಲ್ಲಿ ಸಮಾಪನೆಗೊಳಿಸಲಾಗಿತ್ತು. ಸಮಾಪನಾಧಿಕಾರಿಗಳಾದ ಸಹಕಾರ ಅಭಿವೃದ್ಧಿ ಅಧಿಕಾರಿ ಮೊಳಕಾಲ್ಮೂರು ತಾಲ್ಲೂಕು ಇವರ ವರದಿಯ ಮೇರೆಗೆ ಉಲ್ಲೇಖ (3) ರ ಪತ್ರದಲ್ಲಿ ಉಪ ನಿಬಂಧಕರು, ಸಂಘದ ನೊಂದಣಿ ರದ್ದುಗೊಳಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಸಂಘದ ಸಮಾಪನಾಧಿಕಾರಿಗಳು ದಿನಾಂಕ:31–03–2010 ರ ಅಂತ್ಯಕ್ಕೆ ಜಮಾ–ಖರ್ಚು ಮಾಡಿ ಸಂಘದ ಆಡಿಟ್ ಮಾಡಿಸಿ ಆಸ್ತಿ–ಜವಾಬ್ದಾರಿ ತ:ಖ್ತೆಯನ್ನು ಶೂನ್ಯಗೊಳಿಸಿರುತ್ತಾರೆ. ಸದರಿ ಆಸ್ತಿ–ಜವಾಬ್ದಾರಿ ತ:ಖ್ತೆಯನ್ನು ಸಮಾಪನಾಧಿಕಾರಿಗಳು ಹಾಗೂ ಸಹಕಾರ ಸಂಘಗಳ ಲೆಕ್ಕಪರಿಶೋಧಕರು, ಮೊಳಕಾಲ್ಮೂರು ಇವರು ದೃಢೀಕರಿಸಿರುತ್ತಾರೆ. ಇದರಿಂದ ಸದರಿ ಸಂಘದ ಆಸ್ತಿ–ಜವಾಬ್ದಾರಿ ಶೂನ್ಯವೆಂದು ತಿಳಿಸಿರುತ್ತಾರೆ.

ಮೇಲಿನ ಕಾರಣಗಳಿಂದ ಹಾಗೂ ಉಪ ನಿಬಂಧಕರ ವರದಿಯ ಮೇರೆಗೆ ಸದರಿ ಸಂಘವನ್ನು ಮುಂದುವರೆಸುವುದು ಸೂಕ್ತವಲ್ಲವೆಂದು ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂ:ಸಿಓ/139/ಸಿಎಲ್‌ಎಂ/2010, ದಿನಾಂಕ:17–02–2011 ರಲ್ಲಿ ದತ್ತವಾಗಿರುವ ಅಧಿಕಾರದನ್ವಯ ಸಿ.ಎಸ್.ವೀರೇಶ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಆದ ನಾನು ಸಮಾಪನೆಯಲ್ಲಿರುವ ಮೊಳಕಾಲ್ಮೂರು ತಾಲ್ಲೂಕು ಸಣ್ಣ ಮತ್ತು ಅತಿ ಸಣ್ಣ ರೈತರ ಸಾಮುದಾಯಿಕ ಬೇಸಾಯ ಸಹಕಾರ ಸಂಘ ನಿಯಮಿತ, ಮೊಳಕಾಲ್ಮೂರು ತಾಲ್ಲೂಕು ಇದರ ನೊಂದಣಿ ಸಂಖ್ಯೆ:ಡಿಆರ್‌ಸಿಎಸ್/ಆರ್‌ಜಿಎಸ್/ಎಲ್‌ಪಿಸಿ/7089/1981–82, ದಿನಾಂಕ:26–12–1982 ನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿರುತ್ತೇನೆ. ಈ ದಿನದಿಂದ ಸದರಿ ಸಂಘವು ಅಸ್ತಿತ್ವವನ್ನು ಕಳೆದುಕೊಂಡಿರುತ್ತದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ದಿನಾಂಕ:31–03–11 ರಂದು ನೀಡಿರುತ್ತೇನೆ.

**ಸಿ.ಎಸ್.ವೀರೇಶ್**
ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು
ಬೆಂಗಳೂರು ಪ್ರಾಂತ, ಬೆಂಗಳೂರು

ಪಿಆರ್–454

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ಕಛೇರಿ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು–560 018.**

**ಕ್ರಸಂ:ಜೆಆರ್‌ಬಿ:ಸಮಾಪನೆ/152/2010–11, ದಿನಾಂಕ:31ನೇ ಮಾರ್ಚ್ 2011**

**ವಿಷಯ:** ಸ್ಥಗಿತಗೊಂಡಿರುವ ತಾಲ್ಲೂಕು ಗ್ರಾಮೋದ್ಯೋಗ ಕಸಬುದಾರರ ಕೈಗಾರಿಕಾ ಸಹಕಾರ ಸಂಘ ನಿ., ಜಗಳೂರು, ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಪತ್ರದ ಸಂಖ್ಯೆ:ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್/09–10, ದಿನಾಂಕ:22–01–2010.

2) ಈ ಕಛೇರಿಯ ಸಮಸಂಖ್ಯೆಯ ಕಾರಣ ಕೇಳುವ ನೋಟೀಸಿನ ದಿನಾಂಕ:24–09–2010.

3) ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಪತ್ರದ ಸಂಖ್ಯೆ: ಡಿಆರ್/ಡಿವಿಜಿ/ಸಮಾಪನೆ/ಇತರೆ/ಸಿಆರ್/10–11, ದಿನಾಂಕ:29–11–10.

**ಪ್ರಸ್ತಾವನೆ:**

ತಾಲ್ಲೂಕು ಗ್ರಾಮೋದ್ಯೋಗ ಕಸಬುದಾರರ ಕೈಗಾರಿಕಾ ಸಹಕಾರ ಸಂಘ ನಿ., ಜಗಳೂರು, ಈ ಸಂಘವು ನೋಂದಣಿ ಸಂ:ಎಆರ್‌ಸಿ/517/1980–81, ದಿನಾಂಕ:25–02–1981 ರಂದು ನೋಂದಣಿಯಾಗಿರುತ್ತದೆ. ಸಂಘವು ತಾಲ್ಲೂಕು ಮಟ್ಟದ ಸಂಘವಾಗಿದ್ದು, ಸಂಘದ ಕಾರ್ಯಚಟುವಟಿಕೆಗಳು 2–3 ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಾಲ ವಸೂಲಿ ಮಾಡುವಲ್ಲಿ ಯಾವ ಆಸಕ್ತಿ ಇರುವುದಿಲ್ಲ. ಸಂಘವು ಆಡಳಿತ ಮಂಡಳಿ ಸಭೆ ಮತ್ತು ವಾರ್ಷಿಕ ಮಹಾಸಭೆಗಳನ್ನು ನಡೆಸಿರುವುದಿಲ್ಲ. ಸಂಘದ ಪುನ:ಶ್ಚೇತನಕ್ಕೆ ಯಾವ ಆಸಕ್ತಿಯನ್ನು ಹೊಂದಿರುವುದಿಲ್ಲ. ಸಂಘವು ದಿನಾಂಕ:31–03–2008 ಕ್ಕೆ ರೂ. 3.13 ಲಕ್ಷಗಳಷ್ಟು ನಷ್ಟದಲ್ಲಿರುತ್ತದೆ. ಸಂಘದ ಆಡಳಿತ ಮಂಡಳಿಯು ಸಾಲ ವಸೂಲಿಗೆ ಯಾವ ಕ್ರಮಗಳನ್ನು ಹಾಕಿಕೊಳ್ಳದೆ ಸಂಘವು ನಷ್ಟ ಹೊಂದಲು ಕಾರಣವಾಗಿರುತ್ತದೆ.

ಆದುದರಿಂದ ಸಂಘವನ್ನು ಯಥಾಸ್ಥಿತಿಯಲ್ಲಿ ಮುಂದುವರೆಸುವುದರಿಂದ ಸದಸ್ಯರಿಗಾಗಲೀ ಅಥವಾ ಸಾರ್ವಜನಿಕರಿಗಾಗಲೀ ಪ್ರಯೋಜನ ಇಲ್ಲದೇ ಇರುವುದರಿಂದ ಸದರಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಶಿಫಾರಸ್ಸು ಮಾಡಿ ಉಲ್ಲೇಖ (1) ರಲ್ಲಿ ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಈ ಬಗ್ಗೆ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಉಲ್ಲೇಖ (2) ರ ಪತ್ರದಲ್ಲಿ ಕಾರಣ ಕೇಳುವ ನೋಟೀಸನ್ನು ನೀಡಿ, ಸದರಿ ನೋಟೀಸಿನಲ್ಲಿ 15 ದಿವಸಗಳ ಕಾಲಾವಕಾಶವನ್ನು ನೀಡಲಾಗಿತ್ತು. ಆದರೆ, ಇದುವರೆಗೂ ಯಾವ ನಿರ್ದೇಶಕರಿಂದಲು ಮೌಖಿಕವಾಗಿಯಾಗಲೀ ಅಥವಾ ಲಿಖಿತ ಮೂಲಕವಾಗಲೀ ಹೇಳಿಕೆ ನೀಡದಿರುವುದರಿಂದ ಸಹಕಾರ ಸಂಘಗಳ ಉಪ ನಿಬಂಧಕರು ದಾವಣಗೆರೆ ಇವರ ವರದಿಯ ಮೇರೆಗೆ ಹಾಗೂ ಮೇಲಿನ ಕಾರಣಗಳಿಂದ ಸದರಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂ:ಸಿಓ/139/ಸಿಎಲ್‌ಎಂ/2010, ದಿನಾಂಕ:17–02–2011 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸಿ.ಎಸ್.ವೀರೇಶ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಆದ ನಾನು ತಾಲ್ಲೂಕು ಗ್ರಾಮೋದ್ಯೋಗ ಕಸಬುದಾರರ ಕೈಗಾರಿಕಾ ಸಹಕಾರ ಸಂಘ ನಿ., ಜಗಳೂರು, ದಾವಣಗೆರೆ ಜಿಲ್ಲೆ, ಈ ಸಂಘವನ್ನು ಸಮಾಪನೆಗೊಳಿಸಿ, ಸಮಾಪನಾಧಿಕಾರಿಯಾಗಿ ಸಹಕಾರ ಅಭಿವೃದ್ಧಿ ಅಧಿಕಾರಿ, ಜಗಳೂರು ತಾಲ್ಲೂಕು ಇವರನ್ನು ನೇಮಕ ಮಾಡಿರುತ್ತೇನೆ.

ನೇಮಕಗೊಂಡ ಸಮಾಪನಾಧಿಕಾರಿಗಳು ಕೂಡಲೇ ಸಂಘದ ಪ್ರಭಾರವನ್ನು ವಹಿಸಿಕೊಂಡು ಸಂಘದ ಪುನ:ಶ್ಚೇತನಕ್ಕಾಗಲೀ ಅಥವಾ ಸಂಘದ ನೊಂದಣಿ ರದ್ಧತಿಗಾಗಲೀ ಸೂಕ್ತ ಕ್ರಮಕೈಗೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ದಿನಾಂಕ:31–03–11 ರಂದು ನೀಡಿರುತ್ತೇನೆ.

**ಸಿ.ಎಸ್.ವೀರೇಶ್**
ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು
ಬೆಂಗಳೂರು ಪ್ರಾಂತ, ಬೆಂಗಳೂರು

ಪಿಆರ್–455

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ಕಛೇರಿ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು–560 018.**

**ಕ್ರ.ಸಂ:ಜೆಆರ್‌ಬಿ:ಸಮಾಪನೆ/374/2010–11, ದಿನಾಂಕ:31ನೇ ಮಾರ್ಚ್ 2011**

**ವಿಷಯ:** ಸ್ಥಗಿತಗೊಂಡಿರುವ ಸಹಕಾರ ಸಂಘಗಳನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಉಪ ನಿಬಂಧಕರು, ಬೆಂಗಳೂರು, ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರ ಪತ್ರದ ಸಂಖ್ಯೆ:ಡಿಆರ್‌ಬಿ–ಆರ್/ಸಮಾಪನೆ/52/10–11, ದಿನಾಂಕ:30–3–10.

**ಪ್ರಸ್ತಾವನೆ:**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖದ ಪತ್ರದೊಂದಿಗೆ ಸಹಕಾರ ಸಂಘಗಳ ಉಪ ನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರು ಬೆಂಗಳೂರು ಗ್ರಾಮಾಂತರ ಜಿಲ್ಲೆಯ 09 ಸಹಕಾರ ಸಂಘಗಳು ಸಂಘದ ಉಪನಿಯಮಗಳ ರೀತ್ಯಾ ಉದ್ದೇಶಿತ ಕಾರ್ಯಗಳನ್ನು ಈಡೇರಿಸದೆ ಸುಮಾರು ವರ್ಷಗಳಿಂದ ಸ್ಥಗಿತಗೊಂಡಿದ್ದು, ಇದರಿಂದ ಸಂಘದ ಸದಸ್ಯರಿಗೆ, ಸಾರ್ವಜನಿಕರಿಗೆ ಯಾವುದೇ ಪ್ರಯೋಜನ ಇರುವುದಿಲ್ಲ ಹಾಗೂ ಕಾಲಕಾಲಕ್ಕೆ ಮಹಾಸಭೆ, ಆಡಳಿತ ಮಂಡಳಿ ಸಭೆ ಮತ್ತು ಲೆಕ್ಕಪತ್ರಗಳನ್ನು ಪರಿಶೋಧನೆ ಮಾಡಿದ ಬಗ್ಗೆ ಮಾಹಿತಿ ಇರುವುದಿಲ್ಲ ಮತ್ತು ಸದರಿ ಸಂಘಗಳು ನೊಂದಾಯಿತ ಸ್ಥಳದಲ್ಲಿ ಕಾರ್ಯನಿರ್ವಹಿಸುತ್ತಿಲ್ಲ ಮತ್ತು ಪದಾಧಿಕಾರಿಗಳ ವಿವರಗಳು ಲಭ್ಯವಾಗುತ್ತಿಲ್ಲ ಎಂದು ತಿಳಿಸಿ, 09 ಸಹಕಾರ ಸಂಘಗಳನ್ನು ಸಮಾಪನೆಗೊಳಿಸುವಂತೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತಾರೆ.

**09 ಸಹಕಾರ ಸಂಘಗಳು ಈ ಕೆಳಕಂಡಂತಿರುತ್ತವೆ :–**

| ಕ್ರ.ಸಂ. | ಸಹಕಾರ ಸಂಘದ ಹೆಸರು |
|---|---|
| 1 | ಏರ್ ಅಸೋಸಿಯೇಟ್ಸ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ದೇವನಹಳ್ಳಿ |
| 2 | ವೈಷ್ಣವಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ದೇವನಹಳ್ಳಿ |
| 3 | ನೆಲಮಂಗಲ ತಾಲ್ಲೂಕು ನೊಮ್ಯಾಡಿಕ್ ಟ್ರೈಬ್ಸ್ ವಿವಿದೋದ್ದೇಶ ಸಹಕಾರ ಸಂಘ ನಿ., ನೆಲಮಂಗಲ |
| 4<br>5 | ಸೆಟಿಲೈಟ್ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ನೆಲಮಂಗಲ<br>ನೆಲಮಂಗಲ ತಾಲ್ಲೂಕು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ನೆಲಮಂಗಲ |
| 6 | ನೆಲಮಂಗಲ ತಾಲ್ಲೂಕು ರೇಷ್ಮೆ ಕೈಮಗ್ಗ ನೇಕಾರರ ಸಹಕಾರ ಸಂಘ ನಿಯಮಿತ, ನೆಲಮಂಗಲ |
| 7 | ನೆಲಮಂಗಲ ತಾಲ್ಲೂಕು ಕುರಿ ಸಾಕಾಣಿಕೆದಾರರ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿಯಮಿತ, ನೆಲಮಂಗಲ |

| ಕ್ರ.ಸಂ. | ಸಹಕಾರ ಸಂಘದ ಹೆಸರು |
|---|---|
| 8 | ದೊಡ್ಡಬಳ್ಳಾಪುರ ತಾಲ್ಲೂಕು ಕುರಿ ಸಾಕಾಣಿಕೆದಾರರ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿಯಮಿತ, ದೊಡ್ಡಬಳ್ಳಾಪುರ |
| 9 | ತಾಲ್ಲೂಕು ಸೂಪರ್ ವೈಸಿಂಗ್ ಯೂನಿಯನ್ ಸಹಕಾರ ಸಂಘ ನಿಯಮಿತ ದೊಡ್ಡಬಳ್ಳಾಪುರ |

ಆದುದರಿಂದ, ಮೇಲ್ಕಂಡ ಸಹಕಾರ ಸಂಘಗಳನ್ನು ಯಥಾಸ್ಥಿತಿಯಲ್ಲಿ ಮುಂದುವರೆಸುವುದರಿಂದ ಪ್ರಯೋಜನವಿಲ್ಲವೆಂದು ಈ ಸಂಘಗಳನ್ನು ಸಮಾಪನೆಗೊಳಿಸಲು ದಿನಾಂಕ:23–03–2011 ರಂದು ಪತ್ರಿಕಾ ಪ್ರಕಟಣೆ ಹೊರಡಿಸಿದ್ದು, ಸದರಿ ಸಂಘಗಳಿಂದ ಆಕ್ಷೇಪಣೆಗಳನ್ನು ಕೋರಲಾಗಿತ್ತು. ಆದರೆ, ಸದರಿ ಸಂಘಗಳಿಂದ ಇದುವರೆಗೂ ಯಾವುದೇ ಆಕ್ಷೇಪಣೆಗಳು ಬಂದಿಲ್ಲದಿರುವುದರಿಂದ ಮೇಲ್ಕಂಡ 09 ಸಹಕಾರ ಸಂಘಗಳಿಂದ ಸದಸ್ಯರಿಗಾಗಲೀ ಅಥವಾ ಸಾರ್ವಜನಿಕರಾಗಲೀ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ, ಸದರಿ ಸಂಘಗಳನ್ನು ಸಮಾಪನೆಗೊಳಿಸಲು ಸಹಕಾರ ಸಂಘಗಳ ಉಪ ನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರು ಉಲ್ಲೇಖಿತ ಪತ್ರದಲ್ಲಿ ತಿಳಿಸಿರುತ್ತಾರೆ.

ಮೇಲಿನ ಕಾರಣಗಳಿಂದ ಹಾಗೂ ಉಪ ನಿಬಂಧಕರ ಪತ್ರದ ಮೇರೆಗೆ ಮೇಲ್ಕಂಡ 09 ಸಹಕಾರ ಸಂಘಗಳನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡ ಆದೇಶವನ್ನು ಅನುಬಂಧದೊಂದಿಗೆ ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂ:ಸಿಓ/139/ಸಿಎಲ್‌ಎಂ/2010, ದಿನಾಂಕ:17–02–2011 ರಲ್ಲಿ ದತ್ತವಾಗಿರುವ ಅಧಿಕಾರದನ್ವಯ ಸಿ.ಎಸ್.ವೀರೇಶ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಆದ ನಾನು ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿನ 09 ಸಹಕಾರ ಸಂಘಗಳನ್ನು ಸಮಾಪನೆಗೊಳಿಸಿ, ಸದರಿ ಸಮಾಪನೆಗೊಂಡ ಸಹಕಾರ ಸಂಘಗಳ ಮುಂದೆ ತಿಳಿಸಿರುವ ಅಧಿಕಾರಿಗಳನ್ನು ಸಮಾಪನಾಧಿಕಾರಿಗಳಾಗಿ ನೇಮಕ ಮಾಡಿರುತ್ತೇನೆ.

ನೇಮಕಗೊಂಡ ಸಮಾಪನಾಧಿಕಾರಿಗಳು ಕೂಡಲೇ ಸಂಘದ ಪ್ರಭಾರವನ್ನು ವಹಿಸಿಕೊಂಡು ಸಂಘದ ಪುನ:ಶ್ಚೇತನಕ್ಕಾಗಲೀ ಅಥವಾ ಸಂಘದ ನೊಂದಣಿ ರದ್ಧತಿಗಾಗಲೀ ಸೂಕ್ತ ಕ್ರಮಕೈಗೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ದಿನಾಂಕ:31–03–11 ರಂದು ನೀಡಿರುತ್ತೇನೆ.

**ಸಿ.ಎಸ್.ವೀರೇಶ್**
ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು
ಬೆಂಗಳೂರು ಪ್ರಾಂತ, ಬೆಂಗಳೂರು

**ಅನುಬಂಧ**

| ಕ್ರ. ಸಂ. | ಸಹಕಾರ ಸಂಘದ ಹೆಸರು | ಸಮಾಪನಾಧಿಕಾರಿಯ ಹೆಸರು |
|---|---|---|
| 1 | ಏರ್ ಅಸೋಸಿಯೇಟ್ಸ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ದೇವನಹಳ್ಳಿ | ಸಹಕಾರ ಅಭಿವೃದ್ಧಿ ಅಧಿಕಾರಿ, ದೇವನಹಳ್ಳಿ ಬೆಂಗಳೂರು ಗ್ರಾಮಾಂತರ ಜಿಲ್ಲೆ |
| 2 | ವೈಷ್ಣವಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ದೇವನಹಳ್ಳಿ | ಸಹಕಾರ ಅಭಿವೃದ್ಧಿ ಅಧಿಕಾರಿ, ದೇವನಹಳ್ಳಿ ಬೆಂಗಳೂರು ಗ್ರಾಮಾಂತರ ಜಿಲ್ಲೆ |
| 3 | ನೆಲಮಂಗಲ ತಾಲ್ಲೂಕು ನೊಮ್ಯಾಡಿಕ್ ಟ್ರೈಬ್ಸ್ ವಿವಿದೋದ್ದೇಶ ಸಹಕಾರ ಸಂಘ ನಿ., ನೆಲಮಂಗಲ | ಸಹಕಾರ ಅಭಿವೃದ್ಧಿ ಅಧಿಕಾರಿ, ನೆಲಮಂಗಲ ಬೆಂಗಳೂರು ಗ್ರಾಮಾಂತರ ಜಿಲ್ಲೆ |
| 4 | ಸೆಟಿಲೈಟ್ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ನೆಲಮಂಗಲ | ಸಹಕಾರ ಅಭಿವೃದ್ಧಿ ಅಧಿಕಾರಿ, ನೆಲಮಂಗಲ ಬೆಂಗಳೂರು ಗ್ರಾಮಾಂತರ ಜಿಲ್ಲೆ |
| 5 | ನೆಲಮಂಗಲ ತಾಲ್ಲೂಕು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ನೆಲಮಂಗಲ | ಸಹಕಾರ ಅಭಿವೃದ್ಧಿ ಅಧಿಕಾರಿ, ನೆಲಮಂಗಲ ಬೆಂಗಳೂರು ಗ್ರಾಮಾಂತರ ಜಿಲ್ಲೆ |
| 6 | ನೆಲಮಂಗಲ ತಾಲ್ಲೂಕು ರೇಷ್ಮೆ ಕೈಮಗ್ಗ ನೇಕಾರರ ಸಹಕಾರ ಸಂಘ ನಿಯಮಿತ, ನೆಲಮಂಗಲ | ಸಹಕಾರ ಅಭಿವೃದ್ಧಿ ಅಧಿಕಾರಿ, ನೆಲಮಂಗಲ ಬೆಂಗಳೂರು ಗ್ರಾಮಾಂತರ ಜಿಲ್ಲೆ |
| 7 | ನೆಲಮಂಗಲ ತಾಲ್ಲೂಕು ಕುರಿ ಸಾಕಾಣಿಕೆದಾರರ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿಯಮಿತ, ನೆಲಮಂಗಲ | ಸಹಕಾರ ಅಭಿವೃದ್ಧಿ ಅಧಿಕಾರಿ, ನೆಲಮಂಗಲ ಬೆಂಗಳೂರು ಗ್ರಾಮಾಂತರ ಜಿಲ್ಲೆ |
| 8 | ದೊಡ್ಡಬಳ್ಳಾಪುರ ತಾಲ್ಲೂಕು ಕುರಿ ಸಾಕಾಣಿಕೆದಾರರ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿಯಮಿತ, ದೊಡ್ಡಬಳ್ಳಾಪುರ | ಮಾರಾಟಾಧಿಕಾರಿ ಸಹಕಾರ ಸಂಘಗಳ ನಿಬಂಧಕರ ಕಛೇರಿ, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ |
| 9 | ತಾಲ್ಲೂಕು ಸೂಪರ್ ವೈಸಿಂಗ್ ಯೂನಿಯನ್ ಸಹಕಾರ ಸಂಘ ನಿಯಮಿತ ದೊಡ್ಡಬಳ್ಳಾಪುರ | ಮಾರಾಟಾಧಿಕಾರಿ ಸಹಕಾರ ಸಂಘಗಳ ನಿಬಂಧಕರ ಕಛೇರಿ, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ |

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು
ಬೆಂಗಳೂರು ಪ್ರಾಂತ, ಬೆಂಗಳೂರು

ಪಿಆರ್–456

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ.

**ಸಂಖ್ಯೆ:ಡಿಆರ್‌ಕೆ/ಎಲ್‌ಕ್ಯೂಡಿ/79/2010–11, ದಿನಾಂಕ:25ನೇ ಮಾರ್ಚ್ 2011**

**ವಿಷಯ:** ಕಾರ್ಯವನ್ನು ನಿರ್ವಹಿಸದೆ ಸ್ಥಗಿತಗೊಂಡಿರುವ ಹೊನ್ನೇನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹೊನ್ನೇನಹಳ್ಳಿ, ಕೋಲಾರ ತಾಲ್ಲೂಕು ಈ ಸಂಘವನ್ನು ಸಮಾಪನೆಗೆ ಒಳಪಡಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರ ಪತ್ರ ಸಂಖ್ಯೆ:ಎಆರ್/49/ಸಮಾಪನೆ/ಸಿಆರ್./5/2010–11 ದಿನಾಂಕ: 19–1–2011.

**ಪ್ರಸ್ತಾವನೆ:**

ಹೊನ್ನೇನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹೊನ್ನೇನಹಳ್ಳಿ, ಕೋಲಾರ ತಾಲ್ಲೂಕು ಇದು ತನ್ನ ಕಾರ್ಯವನ್ನು ನಿರ್ವಹಿಸದಂತೆ ನಿಷ್ಕ್ರಿಯಗೊಂಡಿರುವುದಾಗಿ, ಸಂಘವನ್ನು ಪುನ:ಶ್ಚೇತನಗೊಳಿಸಲು ಸಾಧ್ಯವಿಲ್ಲದಿರುವುದರಿಂದ ಸಮಾಪನೆಗೊಳಿಸಬೇಕೆಂದು ಉಲ್ಲೇಖದ ಪತ್ರದಲ್ಲಿ ಕೋಲಾರ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಅಲ್ಲದೆ, ಕೋಲಾರ ಹಾಲು ಒಕ್ಕೂಟದ ಅಧಿಕಾರಿಗಳು ಸಹ ಸಂಘವು ತನ್ನ ಬೈಲಾ ರೀತ್ಯಾ ಕಾರ್ಯನಿರ್ವಹಿಸದಂತೆ ಸ್ಥಗಿತಗೊಂಡಿದ್ದು, ಈ ಸಂಘವನ್ನು ಮುಂದುವರೆಸುವುದರಿಂದ ಸದಸ್ಯರಿಗೆ ಯಾವುದೇ ಪ್ರಯೋಜನೆ ಇಲ್ಲದಿರುವುದರಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72 ರನ್ವಯ ಋಣಸಮಾಪನೆಗೊಳಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟಿರುವುದಾಗಿ ತಿಳಿಸಿದೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಹಾಗೂ ಕೋಲಾರ ಹಾಲು ಒಕ್ಕೂಟದ ಅಧಿಕಾರಿಗಳ ಮತ್ತು ಕೋಲಾರ ಉಪವಿಭಾಗದ ಸಹಾಯಕ ನಿಬಂಧಕರ ಅಭಿಪ್ರಾಯದಂತೆ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಆದೇಶ**

ಈ ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72(2)(ಬಿ) ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/69/ಸಿಎಲ್‌ಎಂ/2001 ದಿನಾಂಕ:21–11–2001 ರಂತೆ ದತ್ತವಾದ ಅಧಿಕಾರವನ್ನು ಪ್ರಯೋಗಿಸಿ ಕೆ.ಎಲ್. ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಹೊನ್ನೇನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹೊನ್ನೇನಹಳ್ಳಿ, ಕೋಲಾರ ತಾಲ್ಲೂಕು ಈ ಸಹಕಾರ ಸಂಘವನ್ನು ಋಣ ಸಮಾಪನೆಗೊಳಿಸಿ, ಸಂಘಕ್ಕೆ ಸಹಕಾರ ಸಂಘಗಳ ನಿರೀಕ್ಷಕರು, ಕೋಲಾರ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶವನ್ನು ಹೊರಡಿಸಿರುತ್ತೇನೆ.

ಸಂಘದ ಸಮಾಪನಾಧಿಕಾರಿಗಳು ಸಂಘದ ಸಂಪೂರ್ಣ ಪ್ರಭಾರವನ್ನು ಪಡೆದು ಸಂಘದ ಆಸ್ತಿ–ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ 3 ತಿಂಗಳ ಒಳಗೆ ಸಂಘದ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವೆ ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ಈ ದಿನ ಅಂದರೆ, ದಿನಾಂಕ:25–3–2011 ರಂದು ನನ್ನ ಸಹಿ ಹಾಗು ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

**ಕೆ.ಎಲ್. ನರಸಿಂಹಮೂರ್ತಿ**
ಸಹಕಾರ ಸಂಘಗಳ ಉಪನಿಬಂಧಕರು
ಕೋಲಾರ ಜಿಲ್ಲೆ, ಕೋಲಾರ

ಪಿಆರ್–448

### ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ: ಡಿಟಿಸಿಆರ್ : 02 (ಪೋಲೀಸ್)/2009–10, ದಿನಾಂಕ : 19–02–2011.**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ / ಆರೋಪಿ** |
| --- | --- | --- |
| ಆರಕ್ಷಕ ಉಪ ನಿರೀಕ್ಷಕರು, ಬದನವಾಳು ಪೋಲೀಸ್ ಠಾಣೆ, ನಂಜನಗೂಡು ತಾಲ್ಲೂಕು. | | ಶಂಕರ್ ಬಿನ್ ರಂಗಯ್ಯ ಹೊಸಕೋಟೆ ಗ್ರಾಮ |

**ಪ್ರಕರಣದ ಮುಖ್ಯಾಂಶಗಳು :**

ದಿನಾಂಕ : 24–06–2010 ರಂದು ಮಧ್ಯಾಹ್ನ 2–45 ಗಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಬದನವಾಳು ಪೋಲೀಸ್ ಠಾಣೆ ಇವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ನಂಜನಗೂಡು ತಾಲ್ಲೂಕು, ನಂಜನಗೂಡು–ಟಿ.ನರಸೀಪುರ ರಸ್ತೆ, ಗೀಕಳ್ಳಿ ಕ್ರಾಸ್‌ನಲ್ಲಿರುವ ಬಸ್ ನಿಲ್ದಾಣದ ಮುಂಭಾಗದಲ್ಲಿ ಟಿಎನ್–39/ ವಿ–3417 ನೋಂದಣಿ ಸಂಖ್ಯೆಯ ಹಿರೋಹೊಂಡಾ ಸ್ಪ್ಲೆಂಡರ್ ವಾಹನದಲ್ಲಿ ಅಕ್ರಮವಾಗಿ 8.280 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ, ಮದ್ಯವನ್ನು ಜಪ್ತುಗೊಳಿಸಿ, ಆರೋಪಿಯಾದ ಶಂಕರ್ ಬಿನ್ ರಂಗಯ್ಯ ಇವರನ್ನು ದಸ್ತಗಿರಿ ಮಾಡಿರುವುದಾಗಿ ಠಾಣಾ ಮೊಕದ್ದಮೆ ಸಂಖ್ಯೆ : 108/2010ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34ರ ರೀತ್ಯಾ ಮೊಕದ್ದಮೆ

ದಾಖಲಿಸಿ, ಜಪ್ತುಪಡಿಸಲಾದ ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ : 22–07–10ರಲ್ಲಿ ಈ ಪ್ರಾಧಿಕಾರದ ಅನುಮತಿಗಾಗಿ ಕೋರಿರುತ್ತಾರೆ. ಅದರಂತೆ ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ಈ ಪ್ರಕರಣದಲ್ಲಿ ಜಪ್ತುಪಡಿಸಲಾದ ಮದ್ಯದ ಪೈಕಿ ಮಾದರಿ ತೆಗೆಯಲಾದ ಮಾದಕದ್ರವ್ಯಗಳನ್ನು ಕೇಂದ್ರ ರಾಸಾಯನಿಕ ಪ್ರಯೋಗಾಲಯಕ್ಕೆ ಒಳಪಡಿಸಿ ವರದಿ ಪಡೆಯಲಾಗಿ ಈಥೈಲ್ ಅಲ್ಕೋಹಾಲ್ ಅಂಶ ಕಂಡುಬಂದಿರುವುದಾಗಿ, ಮಾನವನ ಸೇವನೆಗೆ ಯೋಗ್ಯವಾಗಿರುತ್ತದೆಂದು ತಮ್ಮ ಅಭಿಪ್ರಾಯವನ್ನು ತಿಳಿಸಿರುತ್ತಾರೆ.

ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರು ಹಾಗೂ ಮೈಸೂರು ಉಪ ವಿಭಾಗದ ಅಬಕಾರಿ ನಿರೀಕ್ಷಕರು ವರದಿಯನ್ನು ಸಲ್ಲಿಸಿ ಜಪ್ತುಪಡಿಸಲಾದ ವಾಹನವನ್ನು ನಿಯಮಾನುಸಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಬೇಕೆಂದು ಕೋರಿರುತ್ತಾರೆ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ : 24–06–2010 ರಂದು ನಂಜನಗೂಡು ತಾಲ್ಲೂಕು, ನಂಜನಗೂಡು–ಟಿ.ನರಸೀಪುರ ರಸ್ತೆ, ಗೀಕಳ್ಳಿ ಕ್ರಾಸ್‌ನಲ್ಲಿರುವ ಬಸ್ ನಿಲ್ದಾಣದ ಮುಂಭಾಗದಲ್ಲಿ **ಟಿಎನ್–39/ವಿ–3417 ನೋಂದಣಿ ಸಂಖ್ಯೆಯ ಹಿರೋಹೊಂಡಾ ಸ್ಪ್ಲೆಂಡರ್** ವಾಹನದಲ್ಲಿ ಅಕ್ರಮವಾಗಿ 8.280 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿಯಾದ ಶಂಕರ್ ಬಿನ್ ರಂಗಯ್ಯ ಎಂಬುವರನ್ನು ಸ್ಥಳದಲ್ಲಿ ದಸ್ತಗಿರಿ ಮಾಡಲಾಗಿರುತ್ತದೆ. ಈ ಬಗ್ಗೆ ಅರ್ಜಿದಾರರ ಮೇಲೆ ಕಲಂ 43(ಬಿ)(2)ರ ಅಡಿಯಲ್ಲಿ ಅರ್ಜಿದಾರರ ಮೇಲೆ ಜವಾಬ್ದಾರಿಗಳಿದ್ದು, ಅದನ್ನು ನಿರ್ವಹಿಸುವ ಆದ್ಯ ಕರ್ತವ್ಯ ಅರ್ಜಿದಾರರ ಮೇಲಿದ್ದು, ಈ ಕಾರಣದಿಂದಾಗಿ ಆತ ನೇರವಾಗಿ ಈ ಪ್ರಕರಣದಲ್ಲಿ ಭಾಗಿಯಾಗಿಲ್ಲದಿದ್ದರೂ ಕೂಡಾ ಪರೋಕ್ಷವಾಗಿ ಆತನೇ ಹೊಣೆಗಾರನಾಗಿರುತ್ತಾನೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (7) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/02(ಪೋಲೀಸ್)/2009–10, ದಿನಾಂಕ : 19–02–2011.**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ)(2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅರಕ್ಷಕ ಉಪ ನಿರೀಕ್ಷಕರು, ಬದನವಾಳು ಪೋಲೀಸ್ ಠಾಣೆ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 108/2010, ದಿ : 24–06–2010 ರಂದು ವಶಪಡಿಸಿಕೊಂಡ **ಟಿಎನ್–39/ವಿ–3417 ನೋಂದಣಿ ಸಂಖ್ಯೆಯ ಹಿರೋಹೊಂಡಾ ಸ್ಪ್ಲೆಂಡರ್** ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2011ನೇ ಇಸವಿ ಫೆಬ್ರವರಿ ತಿಂಗಳ 19ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ.ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿಆರ್–334

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್ : 185 (ಪೋಲೀಸ್)/2010–11, ದಿನಾಂಕ : 26–02–2011.**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ಕೆ.ಆರ್.ನಗರ, ಪೋಲೀಸ್ ಠಾಣೆ, ಕೆ.ಆರ್.ನಗರ | | ಯೋಗೇಶ್ ಬಿನ್ ಲೇಟ್ ದಾಸೇಗೌಡ ಕೆ.ಆರ್.ನಗರ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು :**

ದಿನಾಂಕ : 26–02–2010 ರಂದು ಆರಕ್ಷಕ ಉಪ ನಿರೀಕ್ಷಕರು, ಕೆ.ಆರ್.ನಗರ ಪೋಲೀಸ್ ಠಾಣೆ ಇವರು ಬಾತ್ಮೀದಾರದಿಂದ ಬಂದ ಖಚಿತ ಮಾಹಿತಿ ಮೇರೆಗೆ ಗಸ್ತು ನಿರತ ಸಮಯದಲ್ಲಿ ಕೆ.ಆರ್.ನಗರ ತಾ॥, ಚುಂಚನಕಟ್ಟೆ ಗ್ರಾಮ, ಚುಂಚನಕಟ್ಟೆ ಔಟ್ ಪೋಸ್ಟ್ ಹತ್ತಿರ, **ಕೆಎ–09/ಇಎಲ್–1519 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ಸ್ಪೆಂಡರ್ ಪ್ಲಸ್** ವಾಹನದಲ್ಲಿ 8.640 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ

ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಆರೋಪಿಯಾದ ಯೋಗೇಶ್ ಬಿನ್ ಲೇಟ್ ದಾಸೇಗೌಡ ಎಂಬುವರನ್ನು ದಸ್ತಗಿರಿ ಮಾಡಿರುವುದಾಗಿ ಠಾಣಾ ಮೊಕದ್ದಮೆ ಸಂಖ್ಯೆ : 81/2010 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14, 32, 34ರ ರೀತ್ಯಾ ಮೊಕದ್ದಮೆ ದಾಖಲಿಸಿ, ಜಪ್ತುಪಡಿಸಲಾದ ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ಅನುಮತಿಗಾಗಿ ಕೋರಿರುತ್ತಾರೆ. ಅದರಂತೆ ಕೆ.ಆರ್.ನಗರ ವಲಯದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ : 26–02–2010 ರಂದು ಕೆ.ಆರ್.ನಗರ ತಾ॥, ಚುಂಚನಕಟ್ಟೆ ಗ್ರಾಮ, ಚುಂಚನಕಟ್ಟೆ ಔಟ್ ಪೋಸ್ಟ್ ಹತ್ತಿರ, **ಕೆಎ–09/ಇಎಲ್–1519 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ಸ್ಪ್ಲೆಂಡರ್ ಪ್ಲಸ್** ವಾಹನದಲ್ಲಿ 8.640 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿಯಾದ ಯೋಗೇಶ್ ಬಿನ್ ಲೇಟ್ ದಾಸೇಗೌಡ ಎಂಬುವರನ್ನು ಸ್ಥಳದಲ್ಲಿ ದಸ್ತಗಿರಿ ಮಾಡಲಾಗಿರುತ್ತದೆ. ಈ ಬಗ್ಗೆ ಅರ್ಜಿದಾರರ ಮೇಲೆ ಕಲಂ 43(ಬಿ)(2)ರ ಅಡಿಯಲ್ಲಿ ಕಾನೂನಿನಲ್ಲಿ ವಿವಿಧ ಜವಾಬ್ದಾರಿಗಳಿದ್ದು, ಅದನ್ನು ನಿರ್ವಹಿಸುವ ಆದ್ಯ ಕರ್ತವ್ಯ ಅರ್ಜಿದಾರರ ಮೇಲಿದ್ದು, ಈ ಕಾರಣದಿಂದಾಗಿ ಆತ ನೇರವಾಗಿ ಈ ಪ್ರಕರಣದಲ್ಲಿ ಭಾಗಿಯಾಗಿಲ್ಲದಿದ್ದರೂ ಕೂಡಾ ಪರೋಕ್ಷವಾಗಿ ಆತನೇ ಹೊಣೆಗಾರನಾಗಿರುತ್ತಾನೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (1) ವರ್ಷಕ್ಕೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನುಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮಿಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/185 (ಪೋಲೀಸ್)/2010–11, ದಿನಾಂಕ : 26–02–2011.**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ)(2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅರಕ್ಷಕ ಉಪ ನಿರೀಕ್ಷಕರು, ಕೆ.ಆರ್.ನಗರ ಪೋಲೀಸ್ ಠಾಣೆ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 81/2010, ದಿ : 26–02–2010ರಂದು ವಶಪಡಿಸಿಕೊಂಡ **ಕೆಎ–09/ಇಎಲ್–1519 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ಸ್ಪ್ಲೆಂಡರ್ ಪ್ಲಸ್** ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2011ನೇ ಇಸವಿ ಫೆಬ್ರವರಿ ತಿಂಗಳ 26ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ.ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿಆರ್–335

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**
**ಸಂಖ್ಯೆ: ಡಿಟಿಸಿಆರ್ : 509/2009–10, ದಿನಾಂಕ : 19–02–2011.**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ / ಆರೋಪಿ** |
|---|---|---|
| ಅಬಕಾರಿ ಉಪ ನಿರೀಕ್ಷಕರು, ಹುಣಸೂರು ಉಪ ವಿಭಾಗ, ಹುಣಸೂರು. | | ಶಿವಕುಮಾರ್ ಬಿನ್ ಸಿದ್ಧಾಚಾರಿ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ : 05–05–2010ರಂದು ಬೆಳಿಗ್ಗೆ 07–00 ಗಂಟೆಯ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, ಹುಣಸೂರು ಉಪ ವಿಭಾಗ ಇವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಕೆ.ಆರ್.ನಗರ್ ಟೌನ್, ಬಸವೇಶ್ವರ ಬ್ಲಾಕ್‌ನ ಮಹದೇಶ್ವರ ದೇವಸ್ಥಾನದ ಮುಂಭಾಗದಲ್ಲಿ **ಕೆಎ–45/ಎಚ್–3032 ನೋಂದಣಿ ಸಂಖ್ಯೆಯ ಬಜಾಜ್ ಡಿಸ್ಕವರ್** ವಾಹನದಲ್ಲಿ ಅಕ್ರಮವಾಗಿ 8.640ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ವಶಪಡಿಸಿಕೊಂಡು ಶಿವಕುಮಾರ್ ಬಿನ್ ಸಿದ್ಧಾಚಾರಿ ಎಂಬುವವನನ್ನು ದಸ್ತಗಿರಿ ಮಾಡಿರುವುದಾಗಿ ಪ್ರಕರಣ ಸಂ: 16/09–10ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14 ಮತ್ತು 32, 38(ಎ), 43(ಎ)ರ ರೀತ್ಯಾ ಮೊಕದ್ದಮೆಯನ್ನು ದಾಖಲಿಸಿ, ಮುಂದಿನ ಕ್ರಮಕ್ಕಾಗಿ ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ ಬಿ ವಹಿಯ ಪ್ರತಿಯನ್ನು ಮತ್ತು ಮೌಲ್ಯವನ್ನು ನಿರ್ಧರಿಸಲು ಕೋರಿ ದಿನಾಂಕ : 19–06–2010ರಂದು ಹುಣಸೂರು ತಾಲ್ಲೂಕಿನ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ಬರೆಯಲಾಗಿದ್ದು, ಸದರಿಯವರಿಂದ ಇದೂವರೆವಿಗೂ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ : 05.05.2010ರಂದು ಕೆ.ಆರ್.ನಗರ್ ಟೌನ್, ಬಸವೇಶ್ವರ ಬ್ಲಾಕ್‌ನ ಮಹದೇಶ್ವರ ದೇವಸ್ಥಾನದ ಮುಂಭಾಗದಲ್ಲಿ ಹತ್ತಿರ **ಕೆಎ–45/ಎಚ್–3032 ನೋಂದಣಿ ಸಂಖ್ಯೆಯ ಬಜಾಜ್ ಡಿಸ್ಕವರ್** ವಾಹನದಲ್ಲಿ ಅಕ್ರಮವಾಗಿ 8.640ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿಯಾದ ಶಿವಕುಮಾರ್ ಬಿನ್ ಸಿದ್ಧಾಚಾರಿ ಎಂಬುವವರನ್ನು ಸ್ಥಳದಲ್ಲಿ ದಸ್ತಗಿರಿ ಮಾಡಲಾಗಿರುತ್ತದೆ. ಈ ಬಗ್ಗೆ ಅರ್ಜಿದಾರರ ಮೇಲೆ ಕಲಂ 43(ಬಿ)(2)ರ ಅಡಿಯಲ್ಲಿ ಅರ್ಜಿದಾರರ ಮೇಲೆ ಜವಾಬ್ದಾರಿಗಳಿದ್ದು, ಅದನ್ನು ನಿರ್ವಹಿಸುವ ಆದ್ಯ ಕರ್ತವ್ಯ ಅರ್ಜಿದಾರರ ಮೇಲಿದ್ದು, ಈ ಕಾರಣದಿಂದಾಗಿ ಆತ ನೇರವಾಗಿ ಈ ಪ್ರಕರಣದಲ್ಲಿ ಭಾಗಿಯಾಗಿಲ್ಲದಿದ್ದರೂ ಕೂಡಾ ಪರೋಕ್ಷವಾಗಿ ಆತನೇ ಹೊಣೆಗಾರನಾಗಿರುತ್ತಾನೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (08) ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ವಾಹನವನ್ನು ಮಧ್ಯಂತರ ಬಿಡುಗಡೆ ಮಾಡುವುದು ಸಮಂಜಸವಲ್ಲವೆಂದು ತೀರ್ಮಾನಿಸಲಾಯಿತು. ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/509/2009–10, ದಿನಾಂಕ : 19–02–2011**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ)(2)ರ ಅಡಿಯಲ್ಲಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ಉಪ ನಿರೀಕ್ಷಕರು, ಹುಣಸೂರು ಉಪ ವಿಭಾಗ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ : 16/09–10, ದಿ: 05–05–2010ರಂದು ವಶಪಡಿಸಿಕೊಂಡ **ಕೆಎ–45/ಎಚ್–3032** ನೋಂದಣಿ ಸಂಖ್ಯೆಯ **ಬಜಾಜ್ ಡಿಸ್ಕವರ್** ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2011 ನೇ ಇಸವಿ ಫೆಬ್ರವರಿ ತಿಂಗಳ 19ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ.ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿಆರ್–336

## ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ: ಡಿಟಿಸಿಆರ್ : 508/2009–10, ದಿನಾಂಕ : 19–02–2011.**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ / ಆರೋಪಿ** |
|---|---|---|
| ಅಬಕಾರಿ ನಿರೀಕ್ಷಕರು, ಕೆ.ಆರ್.ನಗರ ವಲಯ, ಕೆ.ಆರ್.ನಗರ. | | ತೊಂಟರಾಜು ಬಿನ್ ರಾಜು |

**ಪ್ರಕರಣದ ಮುಖ್ಯಾಂಶಗಳು :**

ದಿನಾಂಕ : 05–05–2010ರಂದು ಬೆಳಿಗ್ಗೆ 08–30 ಗಂಟೆಯ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ಕೆ.ಆರ್.ನಗರ ವಲಯ ಇವರು ಗಸ್ತು ನಿರತ ಸಮಯದಲ್ಲಿ ಬಂದ ಖಚಿತ ವರ್ತಮಾನದ ಮೇರೆಗೆ ಕೆ.ಆರ್.ನಗರ್ ಟೌನ್, ಬಸವೇಶ್ವರ ಬ್ಲಾಕ್‌ನ ಮಹದೇಶ್ವರ ದೇವಸ್ಥಾನದ ಮುಂಭಾಗದಲ್ಲಿ ಕೆಎ–09/ಡಬ್ಲ್ಯೂ–35 ನೋಂದಣಿ ಸಂಖ್ಯೆಯ ಹಿರೋ ಹೊಂಡಾ ಸ್ಪ್ಲೆಂಡರ್ ವಾಹನದಲ್ಲಿ ಅಕ್ರಮವಾಗಿ 8.640ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ವಶಪಡಿಸಿಕೊಂಡು ತೊಂಟರಾಜು ಬಿನ್ ರಾಜು ಎಂಬುವವನನ್ನು ದಸ್ತಗಿರಿ ಮಾಡಿರುವುದಾಗಿ ಪ್ರಕರಣ ಸಂ: 36/2009–10ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14 ಮತ್ತು 32, 38(ಎ), 43(ಎ)ರ ರೀತ್ಯಾ ಮೊಕದ್ದಮೆಯನ್ನು ದಾಖಲಿಸಿ, ಮುಂದಿನ ಕ್ರಮಕ್ಕಾಗಿ ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಹಾಗೂ ವಾಹನದ ಅಂದಾಜು ಮೌಲ್ಯವನ್ನು ನಿಗದಿಪಡಿಸುವಂತೆ ಕೋರಿ, ದಿನಾಂಕ : 19–06–2010 ರಂದು ಹುಣಸೂರು ಮತ್ತು ಮೈಸೂರು ಪಶ್ಚಿಮ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ಬರೆಯಲಾಗಿದ್ದು, 'ಬಿ' ವಹಿಯ ಪ್ರತಿಯ ಬಗ್ಗೆ ಸದರಿಯವರಿಂದ ಇದೂವರೆವಿಗೂ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ : 05.05.2010ರಂದು ಕೆ.ಆರ್.ನಗರ್ ಟೌನ್, ಬಸವೇಶ್ವರ ಬ್ಲಾಕ್‌ನ ಮಹದೇಶ್ವರ ದೇವಸ್ಥಾನದ ಮುಂಭಾಗದಲ್ಲಿ ಹತ್ತಿರ ಕೆಎ–09/ಡಬ್ಲ್ಯೂ–35 ನೋಂದಣಿ ಸಂಖ್ಯೆಯ ಹಿರೋ ಹೊಂಡಾ ಸ್ಲೆಂಡರ್ ವಾಹನದಲ್ಲಿ ಅಕ್ರಮವಾಗಿ 8.640ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿಯಾದ ತೊಂಟರಾಜು ಬಿನ್ ರಾಜು ಎಂಬುವವರನ್ನು ಸ್ಥಳದಲ್ಲಿ ದಸ್ತಗಿರಿ ಮಾಡಲಾಗಿರುತ್ತದೆ. ಈ ಬಗ್ಗೆ ಅರ್ಜಿದಾರರ ಮೇಲೆ ಕಲಂ 43(ಬಿ)(2)ರ ಅಡಿಯಲ್ಲಿ ಅರ್ಜಿದಾರರ ಮೇಲೆ ಜವಾಬ್ದಾರಿಗಳಿದ್ದು, ಅದನ್ನು ನಿರ್ವಹಿಸುವ ಆದ್ಯ ಕರ್ತವ್ಯ ಅರ್ಜಿದಾರರ ಮೇಲಿದ್ದು, ಈ ಕಾರಣದಿಂದಾಗಿ ಆತ ನೇರವಾಗಿ ಈ ಪ್ರಕರಣದಲ್ಲಿ ಭಾಗಿಯಾಗಿಲ್ಲದಿದ್ದರೂ ಕೂಡಾ ಪರೋಕ್ಷವಾಗಿ ಆತನೇ ಹೊಣೆಗಾರನಾಗಿರುತ್ತಾನೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (08) ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ವಾಹನವನ್ನು ಮಧ್ಯಂತರ ಬಿಡುಗಡೆ ಮಾಡುವುದು ಸಮಂಜಸವಲ್ಲವೆಂದು ತೀರ್ಮಾನಿಸಲಾಯಿತು. ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/508/2009–10, ದಿನಾಂಕ : 19–02–2011**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ)(2)ರ ಅಡಿಯಲ್ಲಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ನಿರೀಕ್ಷಕರು, ಕೆ.ಆರ್.ನಗರ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:36/09–10, ದಿ: 05–05–2010ರಂದು ವಶಪಡಿಸಿಕೊಂಡ ಕೆಎ–09/ಡಬ್ಲ್ಯೂ–35 ನೋಂದಣಿ ಸಂಖ್ಯೆಯ ಹಿರೋ ಹೋಂಡಾ ಸ್ಲೆಂಡರ್ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2011 ನೇ ಇಸವಿ ಫೆಬ್ರವರಿ ತಿಂಗಳ 19ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ.ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿಆರ್–337

**ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಚೇರಿ, ಬಾಗಲಕೋಟೆ**

**ಸಂಖ್ಯೆ ಇ2:ಪ್ರಾಶಾಶಿ:ಗೈರು ಹಾಜರಿ:ಶಿಸ್ತುಕ್ರಮ:46:10–11/15369, ದಿನಾಂಕ:5ನೇ ಮಾರ್ಚ್ 2011**

**ಅಧಿಸೂಚನೆ**

**ವಿಷಯ:** ಶಾಲಾ ಕೆಲಸಕ್ಕೆ ದೀರ್ಘಾವಧಿಯಿಂದ ಅನಧಿಕೃತ ಗೈರು ಉಳಿದ ಶ್ರೀಮತಿ ಎ.ವ್ಹಿ.ಕುಲಕರ್ಣಿ, ಸಶಿ, ಸ.ಹಿ.ಪ್ರಾ.ಶಾಲೆ ಕಲಬೀಳಗಿ, ತಾಲ್ಲೂಕು ಜಮಖಂಡಿ, ಇವರ ಮೇಲೆ ಶಿಸ್ತು ಕ್ರಮ ಕುರಿತು.

**ಉಲ್ಲೇಖ:** 01. ಕ್ಷೇತ್ರ ಶಿಕ್ಷಣಾಧಿಕಾರಿಗಳು, ಜಮಖಂಡಿ ಇವರ ವರದಿ ದಿನಾಂಕ 02–02–2011.

02. ದಿನಾಂಕ 23–2–2011 ರ ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟವಾದ ನೊಟೀಸ್.

03. ಸರಕಾರದ ಅಧಿಸೂಚನೆ ಸಂಖ್ಯೆ ಸಿಆಸುಇ18:ಸೇಇವಿ.2001, ಬೆಂಗಳೂರು ದಿನಾಂಕ:14–09–2001

**ಪ್ರಸ್ತಾವನೆ:**

ಕ್ಷೇತ್ರ ಶಿಕ್ಷಣಾಧಿಕಾರಿಗಳು ಜಮಖಂಡಿ ಇವರು ತಮ್ಮ ವಲಯದಲ್ಲಿಯ ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಕಲಬೀಳಗಿ, ಶಾಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಶ್ರೀಮತಿ ಎ.ವ್ಹಿ.ಕುಲಕರ್ಣಿ, ಸಹ–ಶಿಕ್ಷಕರು, ಇವರು ದಿನಾಂಕ 09–08–2010 ರಿಂದ ಶಾಲಾ ಕೆಲಸಕ್ಕೆ ಅನಧಿಕೃತ ಗೈರು ಉಳಿದಿದ್ದು ಇವರಿಗೆ ಸೇವೆಗೆ ಹಾಜರಾಗುವಂತೆ ಸೂಚಿಸಿ ಸೂಚನಾ ಪತ್ರ ಕಳುಹಿಸಿದರೂ ಸೇವೆಗೆ ಹಾಜರಾಗಿಲ್ಲ. ಇವರ ಅನಧಿಕೃತ ಗೈರು–ಹಾಜರಾತಿಯಿಂದ ವಿದ್ಯಾರ್ಥಿಗಳ ಪಾಠ ಬೋಧನೆಗೆ ತೊಂದರೆಯಾಗಿರುವುದಾಗಿ ಉಲ್ಲೇಖ 01 ರಡಿ ಈ ಕಚೇರಿಗೆ ವರದಿ ಸ್ವೀಕೃತಿವಾಗಿರುತ್ತದೆ. ಸದರಿ ಶಿಕ್ಷಕರ ಮಾಹಿತಿಗೆ ಉಲ್ಲೇಖ 2 ರಡಿ ದಿನಾಂಕ 23–02–2011 ರ ಸಂಯುಕ್ತ ಕರ್ನಾಟಕ ದಿನಪತ್ರಿಕೆಯ ಮೂಲಕ ತಿಳುವಳಿಕೆ ನೀಡಲಾಗಿದ್ದರೂ ಈವರೆಗೂ ಸದರಿ ಶಿಕ್ಷಕರು ಸೇವೆಗೆ ಹಾಜರಾಗುವ ಬಗ್ಗೆ ಪ್ರತಿಕ್ರಿಯಿಸಿರುವುದಿಲ್ಲ. ಇದರಿಂದ ಇವರಿಗೆ ಸೇವೆಯಲ್ಲಿ ಮುಂದುವರೆಯುವ ಇಚ್ಛೆ ಇಲ್ಲವೆಂಬುದಾಗಿ ಪರಿಗಣಿಸಿ ಹಾಗೂ ಇವರ ಗೈರು ಹಾಜರಾತಿಯಿಂದ ವಿದ್ಯಾರ್ಥಿಗಳ ಪಾಠ ಬೋಧನೆಗೆ ತೊಂದರೆಯಾಗಿರುವುದನ್ನು ಗಮನಿಸಿ ಸದರಿ ಶಿಕ್ಷಕರ ಮೇಲೆ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿಷದೀಕರಿಸಿದಂತೆ ಶಾಲಾ ಕೆಲಸಕ್ಕೆ ದೀರ್ಘಾವಧಿಯಿಂದ ಅನಧಿಕೃತ ಗೈರು ಉಳಿದು ವಿದ್ಯಾರ್ಥಿಗಳ ಪಾಠ ಬೋಧನೆಗೆ ತೊಂದರೆ ಮಾಡಿದ ಶ್ರೀಮತಿ ಎ.ವಿ.ಕುಲಕರ್ಣಿ, ಸಹ–ಶಿಕ್ಷಕರು, ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಕಲಬೀಳಗಿ, ತಾಲ್ಲೂಕು ಜಮಖಂಡಿ ಇವರ ಮೇಲೆ

ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ, 1957) ರ ನಿಯಮಗಳ ನಿಯಮ 9(2) ಸಿ ದಲ್ಲಿಯ ಅಧಿಕಾರ ಚಲಾಯಿಸಿ ಉಲ್ಲೇಖ 03 ರ ಸರಕಾರದ ಅಧಿಸೂಚನೆ ಮತ್ತು ಕ.ನಾ.ಸೇ. ನಿಯಮಾವಳಿಗಳ ನಿಯಮ 108 ರನ್ವಯ ಕೂಡಲೇ ಜಾರಿಗೆ ಬರುವಂತೆ ಸದರಿ ಶಿಕ್ಷಕರನ್ನು ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ.

ಕ್ಷೇತ್ರ ಶಿಕ್ಷಣಾಧಿಕಾರಿಗಳು ಜಮಖಂಡಿ ಇವರು ಸದರಿ ಆದೇಶದ ವಿವರವನ್ನು ಸಂಬಂಧಿಸಿದ ಶಿಕ್ಷಕರ ಸೇವಾಪುಸ್ತಕದಲ್ಲಿ ತಪ್ಪದೇ ನಮೂದಿಸಿ ಮುಂದಿನ ಅವಶ್ಯಕ ಕ್ರಮ ಕೈಗೊಳ್ಳುವಂತೆ ಸೂಚಿಸಿದೆ.

ಪಿಆರ್–338 **ಉಪ ನಿರ್ದೇಶಕರು (ಆಡಳಿತ)**

**ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಚೇರಿ, ಬಾಗಲಕೋಟೆ**

**ಸಂಖ್ಯೆ ಇ2:ಪ್ರಾಶಾಶಿ:ಗೈರು ಹಾಜರಿ:ಶಿಸ್ತುಕ್ರಮ:46:10–11/15370, ದಿನಾಂಕ:5ನೇ ಮಾರ್ಚ್ 2011**

**ಅಧಿಸೂಚನೆ**

**ವಿಷಯ:** ಶಾಲಾ ಕೆಲಸಕ್ಕೆ ದೀರ್ಘಾವಧಿಯಿಂದ ಅನಧಿಕೃತ ಗೈರು ಉಳಿದ ಶ್ರೀಮತಿ ಸೈದಾಬೇಗಂ ಮಣಿಯಾರ, ಸಶಿ, ಸ.ಹಿ.ಪ್ರಾ.ಶಾಲೆ ಶಿರಗುಪ್ಪಿ, ತಾಲ್ಲೂಕು ಜಮಖಂಡಿ, ಇವರ ಮೇಲೆ ಶಿಸ್ತು ಕ್ರಮ ಕುರಿತು.

**ಉಲ್ಲೇಖ:** 01. ಕ್ಷೇತ್ರ ಶಿಕ್ಷಣಾಧಿಕಾರಿಗಳು, ಜಮಖಂಡಿ ಇವರ ವರದಿ ದಿನಾಂಕ 02–02–2011.

02. ದಿನಾಂಕ 23–2–2011 ರ ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟವಾದ ನೊಟೀಸ್.

03. ಸರಕಾರದ ಅಧಿಸೂಚನೆ ಸಂಖ್ಯೆ ಸಿಆಸುಇ18:ಸೇಇವಿ.2001, ಬೆಂಗಳೂರು ದಿನಾಂಕ:14–09–2001

**ಪ್ರಸ್ತಾವನೆ:**

ಕ್ಷೇತ್ರ ಶಿಕ್ಷಣಾಧಿಕಾರಿಗಳು ಜಮಖಂಡಿ ಇವರು ತಮ್ಮ ವಲಯದಲ್ಲಿಯ ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಶಿರಗುಪ್ಪಿ, ಶಾಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಶ್ರೀಮತಿ ಸೈದಾಬೇಗಂ ಮಣಿಯಾರ, ಸಹ–ಶಿಕ್ಷಕರು, ಇವರು ದಿನಾಂಕ 01–11–2009 ರಿಂದ ಶಾಲಾ ಕೆಲಸಕ್ಕೆ ಅನಧಿಕೃತ ಗೈರು ಉಳಿದಿದ್ದು ಇವರಿಗೆ ಸೇವೆಗೆ ಹಾಜರಾಗುವಂತೆ ಸೂಚಿಸಿ ಸೂಚನಾ ಪತ್ರ ಕಳುಹಿಸಿದರೂ ಸೇವೆಗೆ ಹಾಜರಾಗಿಲ್ಲ. ಇವರ ಅನಧಿಕೃತ ಗೈರು–ಹಾಜರಾತಿಯಿಂದ ವಿದ್ಯಾರ್ಥಿಗಳ ಪಾಠ ಬೋಧನೆಗೆ ತೊಂದರೆಯಾಗಿರುವುದಾಗಿ ಉಲ್ಲೇಖ 01 ರಡಿ ಈ ಕಚೇರಿಗೆ ವರದಿ ಸ್ವೀಕೃತಿವಾಗಿರುತ್ತದೆ. ಸದರಿ ಶಿಕ್ಷಕರ ಮಾಹಿತಿಗೆ ಉಲ್ಲೇಖ 2 ರಡಿ ದಿನಾಂಕ 23–02–2011 ರ ಸಂಯುಕ್ತ ಕರ್ನಾಟಕ ದಿನಪತ್ರಿಕೆಯ ಮೂಲಕ ತಿಳುವಳಿಕೆ ನೀಡಲಾಗಿದ್ದರೂ ಈವರೆಗೂ ಸದರಿ ಶಿಕ್ಷಕರು ಸೇವೆಗೆ ಹಾಜರಾಗುವ ಬಗ್ಗೆ ಪ್ರತಿಕ್ರಿಯಿಸಿರುವುದಿಲ್ಲ. ಇದರಿಂದ ಇವರಿಗೆ ಸೇವೆಯಲ್ಲಿ ಮುಂದುವರೆಯುವ ಇಚ್ಛೆ ಇಲ್ಲವೆಂಬುದಾಗಿ ಪರಿಗಣಿಸಿ ಹಾಗೂ ಇವರ ಗೈರು ಹಾಜರಾತಿಯಿಂದ ವಿದ್ಯಾರ್ಥಿಗಳ ಪಾಠ ಬೋಧನೆಗೆ ತೊಂದರೆಯಾಗಿರುವುದನ್ನು ಗಮನಿಸಿ ಸದರಿ ಶಿಕ್ಷಕರ ಮೇಲೆ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿಷದೀಕರಿಸಿದಂತೆ ಶಾಲಾ ಕೆಲಸಕ್ಕೆ ದೀರ್ಘಾವಧಿಯಿಂದ ಅನಧಿಕೃತ ಗೈರು ಉಳಿದು ವಿದ್ಯಾರ್ಥಿಗಳ ಪಾಠ ಬೋಧನೆಗೆ ತೊಂದರೆ ಮಾಡಿದ ಶ್ರೀಮತಿ ಸೈದಾಬೇಗಂ ಮಣಿಯಾರ, ಸಹ–ಶಿಕ್ಷಕರು, ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಶಿರಗುಪ್ಪಿ, ತಾಲ್ಲೂಕು ಜಮಖಂಡಿ ಇವರ ಮೇಲೆ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ, 1957) ರ ನಿಯಮಗಳ ನಿಯಮ 9(2) ಸಿ ದಲ್ಲಿಯ ಅಧಿಕಾರ ಚಲಾಯಿಸಿ ಉಲ್ಲೇಖ 03 ರ ಸರಕಾರದ ಅಧಿಸೂಚನೆ ಮತ್ತು ಕ.ನಾ.ಸೇ. ನಿಯಮಾವಳಿಗಳ ನಿಯಮ 108 ರನ್ವಯ ಕೂಡಲೇ ಜಾರಿಗೆ ಬರುವಂತೆ ಸದರಿ ಶಿಕ್ಷಕರನ್ನು ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ.

ಕ್ಷೇತ್ರ ಶಿಕ್ಷಣಾಧಿಕಾರಿಗಳು ಜಮಖಂಡಿ ಇವರು ಸದರಿ ಆದೇಶದ ವಿವರವನ್ನು ಸಂಬಂಧಿಸಿದ ಶಿಕ್ಷಕರ ಸೇವಾಪುಸ್ತಕದಲ್ಲಿ ತಪ್ಪದೇ ನಮೂದಿಸಿ ಮುಂದಿನ ಅವಶ್ಯಕ ಕ್ರಮ ಕೈಗೊಳ್ಳುವಂತೆ ಸೂಚಿಸಿದೆ.

ಪಿಆರ್–339 **ಉಪ ನಿರ್ದೇಶಕರು (ಆಡಳಿತ)**

## ಸಹಕಾರ ಇಲಾಖೆ

**ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಆಲಿ ಆಸ್ಕರ್ ರಸ್ತೆ, ಬೆಂಗಳೂರು–560052**

**ವಿಷಯ:** ಸ್ಥಗಿತಗೊಂಡಿರುವ ಶ್ರೀರಾಮ ಸೇವಾ ಮಡಿಕೆ ಗುಡಿ ಕೈಗಾರಿಕಾ ಸಹಕಾರ ಸಂಘ ನಿ., ಮಂಗಳೂರು ಇದನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 72ರ ಮೇರೆಗೆ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಂಗಳೂರು ರವರ ಪತ್ರ ಸಂಖ್ಯೆ:ಎಆರ್:36:ಎಸ್–8:08:ಎಲ್‌ಕ್ಯೂಡಿ: 2001–02 ದಿನಾಂಕ:06–12–2010.

**ಪ್ರಸ್ತಾವನೆ:**

ಶ್ರೀರಾಮ ಸೇವಾ ಮಡಿಕೆ ಗುಡಿ ಕೈಗಾರಿಕಾ ಸಹಕಾರ ಸಂಘ ನಿ., ಮಂಗಳೂರು ಇದು ಬಹಳ ವರ್ಷಗಳಿಂದ ಸ್ಥಗಿತಗೊಂಡಿದ್ದು, ಇದರ ಕಾರ್ಯಕ್ಷೇತ್ರವು ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳ ವ್ಯಾಪ್ತಿಗೆ ಒಳಪಟ್ಟಿರುತ್ತದೆಂದೂ ಇದರ ಯಾವುದೇ ಲೆಕ್ಕಪತ್ರಗಳು ಲಭ್ಯವಿರುವುದಿಲ್ಲವೆಂದೂ ಸಹಾಯಕ ನಿಬಂಧಕರ ಕಛೇರಿಯಲ್ಲಿ ಲಭ್ಯವಿರುವ ಮಾಹಿತಿಯ ಪ್ರಕಾರ ಸರ್ಕಾರಕ್ಕೆ ಪಾವತಿಸಬೇಕಾದ ಷೇರು ಬಂಡವಾಳ/ಸಾಲ ಇರುವುದಿಲ್ಲವೆಂದೂ ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ದಿನಾಂಕ:10–06–2005ರ ಕನ್ನಡಪ್ರಭ ದಿನಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಿದ್ದು, ಯಾವುದೇ ಪ್ರತಿಕ್ರಿಯೆ

ಬಂದಿಲ್ಲದಿರುವುದರಿಂದ ಸಂಘದ ಅಸ್ಥಿತ್ವದ ಬಗ್ಗೆ ಯಾವುದೇ ಸದಸ್ಯರಿಗೆ ಅಥವಾ ಸಾರ್ವಜನಿಕರಿಗೆ ಅಥವಾ ಆಡಳಿತ ಸಮಿತಿ ಸದಸ್ಯರಿಗೆ ಆಸಕ್ತಿ ಇರುವುದಿಲ್ಲವೆಂದೂ ತಿಳಿಸುತ್ತಾ, ಪ್ರಕರಣ 72ರಡಿ ಸಮಾಪನೆಗೊಳಿಸಿ ಸಮಾಪಕರನ್ನು ನೇಮಿಸುವಂತೆ ಉಲ್ಲೇಖಿತ ಪತ್ರದಲ್ಲಿ ಮಂಗಳೂರು ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಶಿಫಾರಸ್ಸು ಮಾಡಿದ್ದಾರೆ. ಸದರಿ ಪ್ರಸ್ತಾವವನ್ನು ಪರಿಶೀಲಿಸಲಾಗಿ ಈ ಸಂಘವು ಬಹಳ ವರ್ಷಗಳಿಂದ ಸ್ಥಗಿತವಾಗಿದ್ದು, ಈ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

**ಸಂಖ್ಯೆ:ಸಸನಿ.ಸಮಾಪನೆ:76:2010–11, ದಿನಾಂಕ:25–03–2011**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 72(2) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ:139:ಸಿಎಲ್ಎಂ:2010 ದಿನಾಂಕ:17–02–2011ರ ಮೇರೆಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಆರ್.ಎಸ್. ಹುಚ್ಚಾಚಾರಿ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಹೈನುಗಾರಿಕೆ) ಆದ ನಾನು ಸ್ಥಗಿತಗೊಂಡಿರುವ ಶ್ರೀರಾಮ ಸೇವಾ ಮಡಿಕೆ ಗುಡಿ ಕೈಗಾರಿಕಾ ಸಹಕಾರ ಸಂಘ ನಿ., ಮಂಗಳೂರು ಇದನ್ನು ರದ್ದುಪಡಿಸಿ, ಪ್ರಕರಣ 73(1)ರನ್ವಯ ಸಂಘದ ಸಮಾಪಕರನ್ನಾಗಿ ಶ್ರೀ ಗುರುಮೂರ್ತಿ, ಪರಿವೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಮಂಗಳೂರು ಇವರನ್ನು ಸಂಘದ ಸಮಾಪಕರನ್ನಾಗಿ ನೇಮಿಸಿ ಆದೇಶಿಸಿರುತ್ತೇನೆ.

ಸಮಾಪಕರು ಕೂಡಲೇ ಸದರಿ ಸಂಘದ ಪ್ರಭಾರವನ್ನು ವಹಿಸಿಕೊಂಡು, ನಿಯಮಾನುಸಾರ ಸಮಾಪನಾ ಪ್ರಕ್ರಿಯೆ ಪೂರ್ಣಗೊಳಿಸಿ ಸಂಘದ ನೋಂದಣಿ ರದ್ದತಿಗೆ ಇನ್ನು ಅರವತ್ತು ದಿನಗಳೊಳಗೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸೂಚಿಸಲಾಗಿದೆ.

ಈ ಆದೇಶವನ್ನು ಸ್ವಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ದಿನಾಂಕ:25–03–2011ರಂದು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಅಭಿವೃದ್ಧಿ ಅಧಿಕಾರಿ
(ಕೈಗಾರಿಕೆ ಮತ್ತು ಹೈನುಗಾರಿಕೆ)

ಪಿಆರ್–386

## ಸಹಕಾರ ಇಲಾಖೆ

**ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಆಲಿ ಆಸ್ಕರ್ ರಸ್ತೆ, ಬೆಂಗಳೂರು–560052**

**ಸಂಖ್ಯೆ:ಸಸಂನಿ/ಎಲ್‌ಕ್ಯೂಡಿ/53/2005–06, ದಿನಾಂಕ:25ನೇ ಮಾರ್ಚ್ 2011**

**ವಿಷಯ:** ನಿಷ್ಕ್ರಿಯಗೊಂಡಿರುವ ದಕ್ಷಿಣ ಕನ್ನಡ ಜಿಲ್ಲಾ ಯಾಂತ್ರಿಕ ಕೆಲಸಗಾರರ ಸಹಕಾರ ಸಂಘ ನಿ., ಮಂಗಳೂರು ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:**
1) ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು ಇವರ ಪತ್ರ ಸಂಖ್ಯೆ:ಜೆಆರ್ಎಂ/ಬಿ2/29/ಡಿಎಲ್ಎಸ್/05–06 ದಿನಾಂಕ:13–06–2005.
2) ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ) ಇವರ ಸಮ ಸಂಖ್ಯೆಯ ನೋಟೀಸು ದಿನಾಂಕ:08–08–2005.
3) ಮಂಗಳೂರು ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಪತ್ರ ಸಂಖ್ಯೆ:ಎಆರ್/36/ಎಸ್2/53/ಎಲ್‌ಕ್ಯೂಡಿ/2003–04 ದಿನಾಂಕ:06–12–2010.
4) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಂಗಳೂರು ಉಪ–ವಿಭಾಗ, ಮಂಗಳೂರು ಇವರ ಪತ್ರ ಸಂಖ್ಯೆ: ಎಆರ್/36/ಎಸ್2/53/ಎಲ್‌ಕ್ಯೂಡಿ/2003–04 ದಿನಾಂಕ:03–01–2011.

**ಪ್ರಸ್ತಾವನೆ:**

ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಇವರು ಉಲ್ಲೇಖ(1) ರ ಪತ್ರದ ಮೂಲಕ ಪ್ರಸ್ತಾವೆ ಸಲ್ಲಿಸಿ, ನಿಷ್ಕ್ರಿಯಗೊಂಡಿರುವ ದಕ್ಷಿಣ ಕನ್ನಡ ಜಿಲ್ಲಾ ಯಾಂತ್ರಿಕ ಕೆಲಸಗಾರದ ಸಹಕಾರ ಸಂಘ ನಿ., ಮಂಗಳೂರು ಈ ಸಂಘವನ್ನು ಸಮಾಪನೆಗೊಳಿಸುವಂತೆ ಶಿಫಾರಸ್ಸು ಮಾಡಿದ್ದಾರೆ. ಉಲ್ಲೇಖ (2)ರ ನೋಟೀಸಿನ ಮೂಲಕ ಸದರಿ ಸಂಘದ ಆಡಳಿತ ಸಮಿತಿಯವರಿಗೆ ಸೂಚನೆ ನೀಡಿ ಸಂಘವನ್ನು ಸಮಾಪನೆಗೊಳಿಸಲು ಆಕ್ಷೇಪಣೆಯೇನಾದರೂ ಇದ್ದಲ್ಲಿ 15 ದಿನಗಳೊಳಗಾಗಿ ಹೇಳಿಕೆ ಸಲ್ಲಿಸಲು ಅವಕಾಶ ನೀಡಲಾಗಿರುತ್ತದೆ. ಉಲ್ಲೇಖ(3) ರ ಪತ್ರದಲ್ಲಿ ಮಂಗಳೂರು ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಈ ಸಂಘವು 1973–74 ರಿಂದ ಸ್ಥಗಿತವಾಗಿದ್ದು ಆಡಳಿತ ಸಮಿತಿ ಸದಸ್ಯರ ವಿಳಾಸಗಳು ಪತ್ತೆಯಾಗದಿರುವುದರಿಂದ ಮತ್ತು ಪತ್ರಿಕಾ ಪ್ರಕಟಣೆ ಹೊರಡಿಸಿದಾಗ್ಯೂ ಆಸಕ್ತರಾರೂ ಅವರ ಕಛೇರಿಯನ್ನು ಸಂಪರ್ಕಿಸದಿರುವುದನ್ನು ಪರಿಗಣಿಸಿ ಸಂಘವನ್ನು ಪ್ರಕರಣ 72 ರನ್ವಯ ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿದ್ದಾರೆ. ಉಲ್ಲೇಖ(4)ರ ಪತ್ರದಲ್ಲಿ ಈ ಸಂಘವು 1973 ರಿಂದ ಯಾವುದೇ ವ್ಯವಹಾರವನ್ನು ನಡೆಸಿಲ್ಲವೆಂದು 1973 ರ ನಂತರ ಸಂಘದ ಲೆಕ್ಕಪತ್ರಗಳು ಆಡಿಟ್ ಆಗಿರುವುದಿಲ್ಲವೆಂದು ಈ ಸಂಘವು ಸ್ಥಗಿತಗೊಂಡು ಸುಮಾರು 37 ವರ್ಷಗಳು ಕಳೆದಿದ್ದು ಯಾವುದೇ ಲೆಕ್ಕಪತ್ರಗಳು ಲಭ್ಯವಿಲ್ಲವೆಂದು ತಿಳಿಸಿ ನೇರವಾಗಿ ಪ್ರಕರಣ 75 ರಡಿ ನೋಂದಣಿ ಸಂಖ್ಯೆ ರದ್ದುಪಡಿಸುವುದು ಸೂಕ್ತವಾಗಿದೆಯೆಂದು ಶಿಫಾರಸು ಮಾಡಿದ್ದಾರೆ.

ಪ್ರಸ್ತಾವೆಯನ್ನು ಪರಿಶೀಲಿಸಲಾಗಿ ಸಂಘವು ಜಿಲ್ಲಾ ಮಟ್ಟದ್ದಾಗಿದ್ದು 1962 ನೇ ಸಾಲಿನಲ್ಲಿ ನೋಂದಣಿಯಾಗಿರುವುದು, 1973–74 ರಿಂದ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿದ್ದು 1973 ರ ನಂತರ ಲೆಕ್ಕಪರಿಶೋಧನೆಯಾಗದಿರುವುದು, ಪ್ರಕರಣ 65ರ ಪ್ರಕಾರ ನಡೆಸಿದ ಪರಿವೀಕ್ಷಣೆಯನ್ನಾಧರಿಸಿ ಸಂಘವನ್ನು 1975 ರಲ್ಲಿಯೇ ಸಮಾಪನೆಗೊಳಿಸುವಂತೆ ಶಿಫಾರಸು ಮಾಡಿರುವುದು ಸಂಘದ ಆಡಳಿತ ಸಮಿತಿಯ ಸದಸ್ಯರಿಗೆ

ಉಲ್ಲೇಖ (2) ರಲ್ಲಿ ಸಂಘವನ್ನು ಸಮಾಪನೆಗೊಳಿಸುವ ಸಂಬಂಧದಲ್ಲಿ ನೋಟೀಸು ನೀಡಿ ಉತ್ತರ ಸಲ್ಲಿಸಲು ತಿಳಿಸಿರುವುದು, ಸದರಿ ನೋಟೀಸನ್ನು ಸ್ಥಳೀಯ ಪತ್ರಿಕೆಯಲ್ಲಿ ಪ್ರಕಟಿಸಿದ್ದಾಗೂ ಯಾರಿಂದಲೂ ಆಕ್ಷೇಪಣೆ ಬರದಿರುವುದು ಮತ್ತು ಆಡಳಿತ ಸಮಿತಿಯ ಸದಸ್ಯರ ವಿಳಾಸಗಳು ಪತ್ತೆಯಾಗದಿರುವುದು ಕಂಡು ಬಂದಿರುತ್ತದೆ. ದಿನಾಂಕ:30–06–1973 ಕ್ಕೆ ಸಂಘವು ಡಿ.ಸಿ.ಸಿ. ಬ್ಯಾಂಕಿನಿಂದ ಪಡೆದಿರುವ ಸಾಲದ ಬಾಕಿಯು ₹. 36,872.31 ಇರುವುದು, ಸಂಘದ ಸಂಚಿತ ನಷ್ಟವು 30–06–1973 ಕ್ಕೆ ₹. 48,740.98 ಇರುವುದು, ಸಂಘಕ್ಕೆ ಯಾವುದೇ ಆಸ್ತಿ ಇಲ್ಲದಿರುವುದು ಮತ್ತು ಸಂಘವನ್ನು ಪುನರ್‌ಜ್ಜೀವನಗೊಳಿಸಲು ಯಾರಿಗೂ ಆಸಕ್ತಿ ಇಲ್ಲದಿರುವುದು ಸ್ಪಷ್ಟವಾಗಿರುತ್ತದೆ.

ಈ ಸಂಘದ ಲೆಕ್ಕಪತ್ರಗಳನ್ನು ದಿನಾಂಕ:19–02–1975 ರಂದು ಪ್ರಕರಣ 65 ರ ಪ್ರಕಾರ ಪರಿವೀಕ್ಷಣೆ ನಡೆಸಿದ ಸಲ್ಲಿಸಿದ ವರದಿಯಲ್ಲಿ ಇದನ್ನು ಸಮಾಪನೆಗೊಳಿಸಲು ಶಿಫಾರಸು ಮಾಡಿರುವುದರಿಂದ ಪ್ರಕರಣ 72(1) ಅನ್ವಯವಾಗುತ್ತದೆ. ಸದರಿ ಸಂಘವು 1973–74 ರಿಂದ ಸ್ಥಗಿತಗೊಂಡಿದ್ದು ಪ್ರಕರಣ 72(2)(ಬಿ) ಅನ್ವಯವಾಗುತ್ತದೆ. ಸಂಘವು ವ್ಯವಸ್ಥಾಪನೆಗೆ ಸಂಬಂಧಪಟ್ಟ ನಿಬಂಧನೆಗಳಾದ ವಾರ್ಷಿಕ ಮಹಾಸಭೆ ನಡೆಸುವುದು, ಆಡಳಿತ ಸಮಿತಿಗೆ ಕಾಲಕಾಲಕ್ಕೆ ಚುನಾವಣೆ ನಡೆಸಿ ಆಡಳಿತ ಸಮಿತಿಯು ಕಾರ್ಯನಿರ್ವಹಿಸುವುದು, ಮುಖ್ಯ ಕಾರ್ಯನಿರ್ವಾಹಕರನ್ನು ನೇಮಿಸುವುದು, ಬೈಲಾದಲ್ಲಿ ತಿಳಿಸಲಾದ ಉದ್ದೇಶಗಳನ್ನು ಈಡೇರಿಸಲು ಕ್ರಮಕೈಗೊಳ್ಳುವುದು ಇತ್ಯಾದಿ ಪ್ರಕಾರ್ಯಗಳನ್ನು ಕೈಗೊಳ್ಳಲು ವಿಫಲವಾಗಿದ್ದು ಪ್ರಕರಣ 72(2)(ಸಿ) ಅನ್ವಯವಾಗುತ್ತದೆ.

ಮೇಲಿನ ಪರಿಸ್ಥಿತಿಯಲ್ಲಿ ಈ ಸಂಘವನ್ನು ಪ್ರಕರಣ 72 ರನ್ವಯ ಸಮಾಪನೆಗೊಳಿಸುವುದು ಅಗತ್ಯವೆಂದು ಅಭಿಪ್ರಾಯಪಟ್ಟು ಈ ಕೆಳಗಿನ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ವಯ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 72(1) & (2) ರಡಿ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/139/ಸಿಎಲ್‌ಎಂ/2010 ದಿನಾಂಕ:17–02–2011 ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸಿ **ಆರ್.ಎಸ್. ಹುಚ್ಚಾಚಾರಿ, ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಹೈನುಗಾರಿಕೆ)** ಆದ ನಾನು ನಿಷ್ಕ್ರಿಯಗೊಂಡಿರುವ ದಕ್ಷಿಣ ಕನ್ನಡ ಜಿಲ್ಲಾ ಯಾಂತ್ರಿಕ ಕೆಲಸಗಾರರ ಸಹಕಾರ ಸಂಘ ನಿ., ಮಂಗಳೂರು ಈ ಸಂಘವನ್ನು ಸಮಾಪನೆಗೊಳಿಸಿ ಮಂಗಳೂರು ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿಯ ಅಧೀಕ್ಷಕರನ್ನು ಸಮಾಪಕರನ್ನಾಗಿ ನೇಮಿಸಿರುತ್ತೇನೆ. ಸಮಾಪಕರು ಕೂಡಲೇ ಪ್ರಭಾರ ವಹಿಸಿಕೊಂಡು ಒಂದು ತಿಂಗಳೊಳಗಾಗಿ ವಸ್ತುಸ್ಥಿತಿಯ ಬಗ್ಗೆ ವರದಿ ಸಲ್ಲಿಸುವಂತೆ ಹಾಗೂ ನಿಯಮಾನುಸಾರ ಸಮಾಪನಾ ಪ್ರಕ್ರಿಯೆ ಪೂರ್ಣಗೊಳಿಸಿ ಸಂಘದ ನೋಂದಣಿ ರದ್ಧತಿಗೆ ಪ್ರಸ್ತಾವೆಯನ್ನು 90 ದಿನಗಳೊಳಗೆ ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ದಿನಾಂಕ:25–03–2011 ರಂದು ಹೊರಡಿಸಲಾಗಿದೆ.

**ಆರ್.ಎಸ್. ಹುಚ್ಚಾಚಾರಿ,**
ಸಹಕಾರ ಸಂಘಗಳ ಅಪರ ನಿಬಂಧಕರು,
(ಕೈಗಾರಿಕೆ ಮತ್ತು ಹೈನುಗಾರಿಕೆ)

ಪಿಆರ್–387

## ಸಹಕಾರ ಸಂಘಗಳ ಅಪರ ನಿಬಂಧಕರು (ಗೃಹ ಮತ್ತು ಇತರೆ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು–52 ಇವರ ನಡವಳಿಗಳು

**ವಿಷಯ:** ಉತ್ತರ ಕನ್ನಡ ಜಿಲ್ಲಾ ಪೋಲೀಸ್ ಇಲಾಖಾ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ, ಕಾರವಾರ ಇದರ ಸಮಾಪನೆ ಕುರಿತು.

**ಉಲ್ಲೇಖ:**
1. ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಳಗಾಂ ಪ್ರಾಂತ, ಬೆಳಗಾಂ ಇವರ ಪತ್ರ ಸಂ:ಜೆಆರ್‌ಎಲ್/ಇ/69/ಎಲ್‌ಕ್ಯೂಡಿ/2010–11 ದಿ:29–11–10 ಮತ್ತು ದಿ:3–3–2011.
2. ಸಹಕಾರ ಸಂಘಗಳ ಉಪ ನಿಬಂಧಕರು, ಕಾರವಾರ ಇವರ ಪತ್ರದ ಸಂ: ಡಿಆರ್‌ಎನ್/ಎಲ್‌ಕ್ಯೂಡಿ/ಜಿ/ಸಿಆರ್–86/2010–11 ದಿ:27–10–10.

**ಪ್ರಸ್ತಾವನೆ:–**

ಉತ್ತರ ಕನ್ನಡ ಜಿಲ್ಲಾ ಪೋಲೀಸ್ ಇಲಾಖಾ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ, ಕಾರವಾರ, ಈ ಸಂಘವು ಸಂ: ಜೆಆರ್‌ಎಲ್/18700/ಎಚ್‌ಎಸ್‌ಜೆ/96–97/ ದಿ:18–2–1997 ರಂದು ನೋಂದಣಿಯಾಗಿರುತ್ತದೆ. ಇದರ ಕಾರ್ಯವ್ಯಾಪ್ತಿಯು ಜಿಲ್ಲಾಮಟ್ಟದ್ದಾಗಿರುತ್ತದೆ. ಈ ಸಂಘವನ್ನು ಸಮಾಪನೆಗೊಳಿಸಲು ಸಹಕಾರ ಸಂಘಗಳ ಉಪನಿಬಂಧಕರು, ಕಾರವಾರ, ಇವರು ಉಲ್ಲೇಖ(2)ರಲ್ಲಿ ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಳಗಾಂ ಪ್ರಾಂತ, ಬೆಳಗಾಂ ಇವರಿಗೆ ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವೆಯಲ್ಲಿ ಸದರಿ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 65ರಡಿ ಪರಿವೀಕ್ಷಣೆಯನ್ನು ಕೈಗೊಂಡು, ಪರಿವೀಕ್ಷಣಾ ವರದಿ ಆಧಾರದ ಮೇಲೆ ಸಂಘವನ್ನು ಈ ಕೆಳಗಿನ ಕಾರಣಗಳಿಗಾಗಿ ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿ ಉಲ್ಲೇಖ(2)ರಲ್ಲಿ ವಿನಂತಿಸಿರುತ್ತಾರೆ. ಆ ಕಾರಣಗಳು ಈ ಕೆಳಕಂಡಂತೆ ಇರುತ್ತದೆ.

1) ಸಂಘವು ಪೋಟ ನಿಯಮಗಳಿಗುಣವಾಗಿ ಕ್ರಮ ಕೈಗೊಂಡಿರುವುದಿಲ್ಲ.

2) ಸಂಘವು ನೋಂದಣಿಯಾದಾಗಿನಿಂದ ಇಲ್ಲಿಯವರೆಗೆ ಕಾರ್ಯ ನಿರ್ವಹಿಸಿರುವುದಿಲ್ಲ.

3) ಸಂಘದ ಎಲ್ಲಾ ಸದಸ್ಯರು ಶೇರು ಹಣ ಪರತ ಪಡೆದಿದ್ದು ಕೇವಲ 17 ಸದಸ್ಯರು ಮಾತ್ರ ಉಳಿದಿರುತ್ತಾರೆ.

4) ಸಂಘವನ್ನು ಮುಂದುವರಿಸಿಕೊಂಡು ಹೋಗಲು ಆಡಳಿತ ಮಂಡಳಿ ಸದಸ್ಯರಿಗಾಗಲೀ ಅಥವಾ ಇತರೆ ಸದಸ್ಯರಿಗಾಗಲೀ ಆಸಕ್ತಿ ಇರುವುದಿಲ್ಲ.

5) ದಿ:31–03–07 ರವರೆಗೆ ಸಂಘದ ಲೆಕ್ಕಪರಿಶೋಧನೆಯಾಗಿದ್ದು ಅನುಪಾಲನಾ ವರದಿ ಸಲ್ಲಿಸಿರುವುದಿಲ್ಲ.

6) ಸಂಘವನ್ನು ಸಮಾಪನೆಗೊಳಿಸಲು ಕಲಂ 65 ರಡಿ ಕೈಗೊಂಡ ಪರಿವೀಕ್ಷಣಾ ವರದಿಯಲ್ಲಿ ಈ ಸಂಘವು ಯಾವುದೇ ಕಾರಣಕ್ಕೂ ಪುನಃಶ್ಚೇತನವಾಗುವ ಲಕ್ಷಣಗಳು ಕಂಡು ಬರುವುದಿಲ್ಲವೆಂದು ಆದುದರಿಂದ ಸದರಿ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72 ರಂತೆ ಸಮಾಪನೆಗೊಳಿಸಲು ಸೂಕ್ತವೆಂದು ಅಭಿಪ್ರಾಯಪಟ್ಟಿರುತ್ತಾರೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸಂಘವನ್ನು ಕಲಂ 72 (2) ರನ್ವಯ ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಹಾಗೂ ಸಂಘವು ಪೂರ್ಣವಾಗಿ ಸ್ಥಗಿತಗೊಂಡಿರುವುದರಿಂದ, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಳಗಾಂ ಪ್ರಾಂತ, ಬೆಳಗಾಂ ಇವರು ಸದರಿ ಸಂಘವನ್ನು ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ. ಸದರಿ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72(2) ರಂತೆ ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಗಿನ ಆದೇಶ ಹೊರಡಿಸಿದೆ.

**ಆದೇಶ**

**ಸಂಖ್ಯೆ:ಸಸಂನಿ/ಸಮಾಪನೆ/64/2010–11, ದಿನಾಂಕ: 23–03–2011**

ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿ.ಹೆಚ್.ಮಂಜಪ್ಪ ಸಹಕಾರ ಸಂಘಗಳ ಅಪರ ನಿಬಂಧಕರು (ಗೃಹ ಮತ್ತು ಇತರೆ) ಆದ ನಾನು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಓ/ 139/ಸಿಎಲ್ಎಂ/2010 ದಿ:17–2–2011 ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ದತ್ತವಾಗಿರುವ ಅಧಿಕಾರದನ್ವಯ ಉತ್ತರ ಕನ್ನಡ ಜಿಲ್ಲಾ ಪೋಲೀಸ್ ಇಲಾಖಾ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ, ಕಾರವಾರ, ಈ ಸಂಘವನ್ನು ಸಮಾಪನೆಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 73(1) ರನ್ವಯ ಶ್ರೀಮತಿ ಸರಿತಾ ಬೇತಾಳಕರ, ಪ್ರಥಮ ದರ್ಜೆ ಸಹಾಯಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಕಾರವಾರ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿರುತ್ತೇನೆ.

ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು 15 ದಿನಗಳೊಳಗಾಗಿ ಪಡೆದುಕೊಂಡು ಪ್ರಭಾರ ಪಟ್ಟಿಯನ್ನು ಸಲ್ಲಿಸತಕ್ಕದ್ದು. ಅಲ್ಲದೆ ಸಂಘದ ಅಢಾವೆ ಪತ್ರದ ಆಧಾರದ ಮೇಲೆ ಆಧ್ಯತಾ ಪಟ್ಟಿ ತಯಾರಿಸಿ ಈ ಕಛೇರಿಯಿಂದ ಅನುಮತಿ ಪಡೆದು ಆಸ್ತಿಯು ವಸೂಲಾತಿಯ ಆಧ್ಯತೆಯ ಮೇಲೆ ಜವಾಬ್ದಾರಿ ತೀರುವಳಿ ಮಾಡಿ ಸಂಘದ ನೋಂದಣಿ ರದ್ಧತಿಯ ಪ್ರಸ್ತಾವೆಗೆ ಜರೂರು ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 23 –3–2011 ರಂದು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಅಪರ ನಿಬಂಧಕರು,
(ಗೃಹ ಮತ್ತು ಇತರೆ)

ಪಿಆರ್–378

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ.ವಿವ:23/08–09, ದಿನಾಂಕ:05–03–2011**

| | | |
|---|---|---|
| **ಉಪಸ್ಥಿತರು** | : | ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಪಿರ್ಯಾಧಿದಾರರು** | : | ವಲಯ ಅರಣ್ಯಾಧಿಕಾರಿ, ಸೊರಬ ವಲಯ, (ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿಗಳು** | : | (1) ಮೇಘರಾಜ |
| **ಭಾದ್ಯತೆದಾರರು** | : | ಶ್ರೀ ಸುರೇಶ್ ಜೋಸೆಫ್ ವಡೇಕಲ್ ಬಿನ್ ಜೋಸೆಫ್, 40 ವರ್ಷ, ಉಳುವಿ ಗ್ರಾಮ ವಾಸಿ, ಸೊರಬ ತಾಲ್ಲೂಕು. (ಶ್ರೀ ಐ.ಎನ್.ಸುರೇಶ್ ಬಾಬು, ವಕೀಲರು ಸಾಗರ) |

**ಪ್ರಸ್ತಾವನೆ:–**

ದಿ:07–10–2008 ರಂದು ಸೊರಬ ವಲಯದ, ಕಸಬಾ–1 ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರು ಸೊರಬ ತಾ॥ ಉಳುವಿ ಹೋಬಳಿ ಕರ್ಜಿಕೊಪ್ಪ ಗ್ರಾಮದ ಕರ್ಜಿಕೊಪ್ಪ ಮನ್ನಾಜಂಗ್ಲಿಯ 1975ನೇ ಸಾಲಿನ ಸಾಗುವಾನಿ ನೆಡುತೋಪಿನಲ್ಲಿ ರಾತ್ರಿ ಗಸ್ತು ಮಾಡುತ್ತಿರುವಾಗ ನೆಡುತೋಪು ಪಕ್ಕದ ರಸ್ತೆಯಲ್ಲಿ ಒಂದು ವಾಹನ ಬರುತ್ತಿರುವುದನ್ನು ನಿಲ್ಲಿಸಲು ಸೂಚನೆ ನೀಡಿದಾಗ ವಾಹನವನ್ನು ಅಲ್ಲೇ ಬಿಟ್ಟು ವಾಹನದಲ್ಲಿದ್ದ ಆಸಾಮಿಗಳು ಓಡಿ ಪರಾರಿಯಾಗಿರುತ್ತಾರೆ. ಓಡಿ ಹೋದವರಲ್ಲಿ ಒಬ್ಬನಾದ ಮೇಘರಾಜ ಬಿನ್ ಬಂಗಾರಪ್ಪಗೌಡ, 30 ವರ್ಷ, ತಂಡಿಗೆ ಗ್ರಾಮ ಎಂದು ಶ್ರೀ ಗಣೇಶ ವನಪಾಲಕರು ಗುರುತಿಸಿರುತ್ತಾರೆ. ನಂತರ ವಾಹನ ಪರಿಶೀಲಿಸಿದಾಗ ವಾಹನ ಹಸಿರು ಬಣ್ಣದ ಮಾರುತಿ ವ್ಯಾನ್ ನಂ: ಕೆಎಲ್–05–ಹೆಚ್–2719, ಛಾಸ್ಸಿಸ್ ನಂ: ST-91-IN-351876, ಆಗಿದ್ದು, ವಾಹನದೊಳಗೆ ಸಾಗುವಾನಿ 8 ತುಂಡುಗಳಿದ್ದು, ಅದರ ಅಳತೆ ಮಾಡಿದಾಗ 0.212 ಎಂ3 ಪ್ರಮಾಣವಿದ್ದು, ಈ ತುಂಡುಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ. ಆದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಇಲಾಖಾ ಪಂಚರ ಸಮಕ್ಷಮ ವಾಹನ ಮತ್ತು ಸಾಗುವಾನಿ ತುಂಡುಗಳನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು, ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ

144, 165ರ ಪ್ರಕಾರ ಸೊರಬ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ:60/08–09ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ:07–10–2010ರಂದು ಆದೇಶವಾಗಿದೆ.

ಈ ವಾಹನದ ಬಿ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಲು Transport Commissioner Kerala ಇವರಿಗೆ ಸಂ:ಬಿ3.ಅಮೊ.ವಾಹನ.23/08–09 ದಿ:16–10–2008 ರಂದು ಪತ್ರ ಬರೆದು ಕೋರಲಾಗಿದೆ. ಅವರಿಂದ ಯಾವುದೇ ವರದಿ ಈ ನ್ಯಾಯಾಲಯಕ್ಕೆ ಬಂದಿರುವುದಿಲ್ಲ.

ಈ ಪ್ರಕರಣದಲ್ಲಿ ವಲಯ ಅರಣ್ಯಾಧಿಕಾರಿ, ಸೊರಬ ವಲಯ, ಇವರು ದಿ:21–10–2009 ರಂದು ವಿಚರಣಾ ವರದಿ ಸಲ್ಲಿಸಿ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ವಾಹನ ಮಾಲೀಕರು ಉಪಯೋಗಿಸಿರುವುದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ವಾಹನದ ಬಗ್ಗೆ ಆರ್.ಸೀ. ಮಾಲೀಕರೆಂದು ಶ್ರೀ ಸುರೇಶ್ ಜೋಸೆಫ್ ವಡೇಕಲ್ ಬಿನ್ ಜೋಸೆಫ್, 40 ವರ್ಷ, ಉಳುವಿ ಗ್ರಾಮ ವಾಸಿ, ಸೊರಬ ತಾಲ್ಲೂಕು. ಇವರು ವಕೀಲರ ಮುಖಾಂತರ ಮನವಿ ತಯಾರಿಸಿ, ದಿ:28–02–2009 ರಂದು ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯ ಜೊತೆಯಲ್ಲಿ ಮೂಲ ಆರ್.ಸಿ. ಪುಸ್ತಕ ಮತ್ತು ಕೇರಳ ರಾಜ್ಯದ ಪಾಲಾ ಸಾರಿಗೆ ಕಛೇರಿಯಿಂದ ವಿತರಿಸಿದ ಪಾರಂ–28ನ್ನು ಸಹ ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಸದರಿ ದಾಖಲೆಯಲ್ಲಿ ಎನ್.ಓ.ಸಿ.ಯನ್ನು ಸಾರಿಗೆ ಕಛೇರಿ, ಸಾಗರ ಇವರಿಗೆ ವಿತರಿಸಿದ ಬಗ್ಗೆ ನಮೂದಿಸಲಾಗಿದೆ. ಅದರಂತೆ ಈ ನ್ಯಾಯಾಲಯದ ಸಂ:ಬಿ3.ಅಮೊ.ವಾಹನ.ಸಿಆರ್.23/08–09 ದಿ:09–03–2010 ರಂದು ಸಾಗರ ಸಾರಿಗೆ ಕಛೇರಿಗೆ ಪತ್ರ ಬರೆದು ಈ ವಾಹನ ನಿಮ್ಮ ಕಛೇರಿಯಲ್ಲಿ ಯಾರ ಹೆಸರಿಗೆ ನೊಂದಣಿಯಾದ ಬಗ್ಗೆ ಬಿ ಎಕ್ಸ್‌ಟ್ರ್ಯಾಕ್ಟ್ ಸಲ್ಲಿಸಲು ಕೋರಲಾಯಿತು. ಆದರೆ, ಈ ವಾಹನದ ಮಾಲೀಕತ್ವವು ವರ್ಗಾವಣೆಗೆ ಅರ್ಜಿ ಸಲ್ಲಿಸಿಲ್ಲವೆಂದು ಸಾರಿಗೆ ಅಧಿಕಾರಿ, ಸಾಗರ ಇವರ ಪತ್ರ ಸಂ:ಸಪ್ರಾಸಅ.ಸಾಗರ.ಜಿಎಸ್.2010–11ದಿ:22–09–2010ರಲ್ಲಿ ಈ ನ್ಯಾಯಾಲಯಕ್ಕೆ ಹಿಂಬರಹ ನೀಡಿರುತ್ತಾರೆ.

ವಕೀಲರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ಮೂಲ ಆರ್.ಸಿ. ಪುಸ್ತಕದಲ್ಲಿನ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(1)ರ ಪ್ರಕಾರ 30 ದಿನಗಳ ಕಾಲಾವಕಾಶ ನೀಡಿ, ವಾಹನಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಲು, ಇಲ್ಲವಾದ್ದಲ್ಲಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಏಕೆ? ಮುಟ್ಟುಗೋಲು ಹಾಕಿಕೊಳ್ಳಬಾರದು ಎನ್ನುವ ಬಗ್ಗೆ ದಿ:01–01–2010 ರಂದು ನೋಟೀಸ್‌ನ್ನು ವಲಯ ಅರಣ್ಯಾಧಿಕಾರಿ, ಸೊರಬ ಇವರ ಮುಖಾಂತರ ಜಾರಿ ಮಾಡಿದೆ. ಈ ನೋಟಿಸ್‌ಗೆ ಆರ್.ಸಿ. ಮಾಲೀಕರು ದಿ:05–02–2010 ರಂದು ಈ ನ್ಯಾಯಾಲಯಕ್ಕೆ ಹಾಜರಾಗಿ ಲಿಖಿತ ಹೇಳಿಕೆ ಸಲ್ಲಿಸಿರುತ್ತಾರೆ. ಹೇಳಿಕೆಯಲ್ಲಿ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಾಣಿಕೆ ಮಾಡಿದ ವಿಚಾರ ತನಗೆ ತಿಳಿದಿಲ್ಲವೆಂದು ಈ ಕೃತ್ಯಕ್ಕೆ ತಾನಗಲೀ, ತನ್ನ ಚಾಲಕನಾಗಲೀ, ಏಜೆಂಟ್‌ಯಾಗಲೀ ಸಂಬಂಧಿಗಳಲ್ಲವೆಂದು, ಆ ಸಮಯದಲ್ಲಿ ಈ ವಾಹನವನ್ನು ಸುರೇಶ್ ಆಚಾರಿ, ಸೊರಬ ಇವರಿಗೆ ₹.95,000/– ಮಾರಾಟ ಮಾಡಿದ್ದೆಂದು, ಈ ವಾಹನವು ಆತನ ಸ್ವಾಧೀನದಲ್ಲಿತ್ತೆಂದು, ಕೇವಲ ನೊಂದಣಿ ಮಾತ್ರ ನನ್ನ ಹೆಸರಿನಲ್ಲಿಯಿತ್ತೆಂದು, ಈ ವಾಹನದಲ್ಲಿ ಸಾಗುವಾನಿ ನಾಟಾ ಸಾಗಿಸಿದ್ದಲ್ಲಿ ಅದಕ್ಕೆ ನಾನಾಗಲೀ, ನನ್ನ ಚಾಲಕನಾಗಲೀ ಜವಬ್ದಾರಾಗಿರುವುದಿಲ್ಲವೆಂದು, ಈ ಕೇಸಿನಿಂದ ತನನ್ನು ವಿಮುಕ್ತಿಗೊಳಿಸಬೇಕೆಂದು ಪ್ರಾರ್ಥಿಸಿರುತ್ತಾರೆ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಸಂಖ್ಯೆ: ಬಿ3:ಅಮೊ:ವಾಹನ:ಸಿಆರ್–32/08–09/ದಿ:02–12–2008ರಂದು ಪ್ರಕಟಣೆಯನ್ನು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿ:11–12–2008 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ಅದರಂತೆ ಈ ಪ್ರಕರಣವನ್ನು ಅಂತಿಮ ಆದೇಶಕ್ಕೆ ದಿ:27–11–2010 ರಂದು ನಿಗದಿಪಡಿಸಲಾಗಿತ್ತು. ಆದರೆ ಅದೇ ದಿನಾಂಕದಂದು ವಕೀಲರು ಕ್ಲೇಮು ಅರ್ಜಿಯ ಜೊತೆಯಲ್ಲಿ ಶ್ರೀಮತಿ ಸಾವಿತ್ರಿ ಎಸ್ ಆಚಾರಿ, ಸೊರಬ ಇವರಿಗೆ ಜಿ.ಪಿ.ಎ. ನೀಡಿರುವ ಬಗ್ಗೆ ಬಾಂಡ್ ಪೇಪರ್ ಲಗತ್ತಿಸಿರುತ್ತಾರೆ. ಆದರೆ, ಇವರು ಜಿ.ಪಿ.ಎ. ನೀಡಿರುವ ಬಗ್ಗೆ ಈ ನ್ಯಾಯಾಲಯದಲ್ಲಿ ಖಾತ್ರಿಪಡಿಸಿಕೊಳ್ಳಲು ಆರ್.ಸಿ. ಮಾಲೀಕರನ್ನು ಹಾಜರ್ಪಡಿಸುವಂತೆ ದಿ:15–01–2011, 19–02–2011, 26–02–2011 ರಂದು ಅವಕಾಶ ನೀಡಲಾಯಿತು. ಆದರೆ, ಆರ್.ಸಿ. ಮಾಲೀಕರನ್ನು ಈ ಮೂರು ದಿನಾಂಕಗಳಲ್ಲಿ ನ್ಯಾಯಾಲಯಕ್ಕೆ ಹಾಜರ್ಪಡಿಸಿರುವುದಿಲ್ಲ. ಇದರಿಂದ ಆರ್.ಸಿ, ಮಾಲೀಕರಿಗೆ ಈ ಪ್ರಕರಣದಲ್ಲಿ ಮುಂದಿನ ಕ್ರಮಕೈಗೊಳ್ಳಲು ಆಸಕ್ತಿ ಇಲ್ಲವೆಂದು ಪರಿಗಣಿಸಲಾಯಿತು. ಹಾಗೂ ದಿ:04–09–2010ರಲ್ಲಿ ಅಂತಿಮ ಆದೇಶಕ್ಕೆ ನಿಗದಿಪಡಿಸಿದಂತೆ ದಿ:05–03–2011ಕ್ಕೆ ಅಂತಿಮ ಆದೇಶ ಹೊರಡಿಸಲು ದಿನಾಂಕ ನಿಗದಿಪಡಿಸಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:20–07–2010ರಂದು ವಾದ ಮಂಡಿಸಿ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡುತ್ತಿರುವ ಸಮಯದಲ್ಲಿ ವಾಹನವನ್ನು ಅರಣ್ಯ ಉತ್ಪನ್ನದ ಸಮೇತ ವಲಯ ಅರಣ್ಯಾಧಿಕಾರಿ, ಸೊರಬ ವಲಯ, ಇವರು ಜಪ್ತುಮಾಡಿ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಆದ್ದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ ಮತ್ತು ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾಗಿರುತ್ತದೆ. ಆರ್.ಸಿ. ಮಾಲೀಕರೆ ಖುದ್ದಾಗಿ ಈ ನ್ಯಾಯಾಲಯಕ್ಕೆ ಹಾಜರಾಗಿ ವಾಹನವನ್ನು ಬೇರೆಯಾವರಿಗೆ ಮಾರಾಟ ಮಾಡಿದೆನೆಂದು, ಈ ಕೃತ್ಯ ನಡೆಯುವಾಗ ಈ ವಾಹನ ಬೇರೆಯಾವರ ಸುಪರ್ಧಿಯಲ್ಲಿತ್ತೆಂದು ಈ ವಾಹನಕ್ಕೂ ನನ್ನಗೂ ಯಾವುದೇ ಸಂಬಂಧವಿಲ್ಲವೆಂದು ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದರಿಂದ ಹಾಗೂ ಗೌರವನ್ವಿತ ಮಾನ್ಯ ಉಚ್ಚ ನ್ಯಾಯಾಲಯ ಕರ್ನಾಟಕವು ಈ ಕೆಳಗಿನಂತೆ ಆದೇಶ ನೀಡಿರುವುದನ್ನು ಉಲ್ಲೇಖಿಸುತ್ತಾ,

The Hon'ble high Court of Karnataka Bangalore in the case of - Ramesh N Dixit V/S State of Karnataka, 1987 (2) Kar.L.j.Sh.N.278:ILR 1985 Kar.2571 held that the owners required to show under sub-section (2) of section 71-B is that he, his agent, if any and the person in charge of the vehicle (In this case the driver) each, had taken all reasonable and necessary precautions against the misusing of the vehicle and that this offence had been committed without the knowledge or connivance any of them. ……………………………………………………………………………It is not merely enough if the truck owner says that his truck had been misused without his knowledge or connivance, but in addition he is bound to show that he had taken all reasonable and necessary precautions against such misuse. ಅಲ್ಲದೇ ಯಾರೂ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡದಂತೆ ಆರ್.ಸಿ. ಮಾಲೀಕರಾಗಲೀ, ಅವರ ಪರ ವಾಹನ ಚಾಲಕರಾಗಲೀ ಮುನ್ನೆಚ್ಚರಿಕೆ ಕ್ರಮ ಕೈಗೊಂಡಿರುವುದಿಲ್ಲ. ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮನೋಜ್ ಕುಮಾರ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಕಾಯಿದೆ ಪ್ರಕಾರ ವಲಯ ಅರಣ್ಯಾಧಿಕಾರಿ, ಸೊರಬ ವಲಯ, ಇವರು ಜಪ್ತು ಮಾಡಿದ ವಾಹನ ಹಸಿರು ಬಣ್ಣದ ಮಾರುತಿ ವ್ಯಾನ್ ನಂ:ಕೆಎಲ್–05–ಹೆಚ್–2719, ಛಾಸ್ಸಿಸ್ ನಂ: ST-91-IN-351876, ಆಗಿದ್ದು, ಮತ್ತು ಈ ವಾಹನದಲ್ಲಿದ್ದ ಸಾಗುವಾನಿ ಸೈಜು 08=0.212 ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:05–03–2011 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

ಪಿಆರ್–381

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಛೇರಿ**

**ನಂ.ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್:18/2010–11, ದಿನಾಂಕ:31ನೇ ಜನವರಿ 2011**

**ವಿಷಯ:** ಸ್ಥಗಿತಗೊಂಡಿರುವ ಗೂಳ್ಯ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಹಿರಿಯೂರು ತಾಲ್ಲೂಕು ಇದನ್ನು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರ ಪತ್ರದ ಸಂ:ಸನಿ:30:ಸಮಾಪನೆ: ಸಿಆರ್/16/10–11 ದಿನಾಂಕ: 09–11–2010.

2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮ ಸಂಖ್ಯೆ ದಿನಾಂಕ:12–11–2010.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ಉಲ್ಲೇಖ (1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಗೂಳ್ಯ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಹಿರಿಯೂರು ತಾಲ್ಲೂಕು ಸಂಘದ ನೋಂದಣಿ ಸಂಖ್ಯೆ:ಎಆರ್/30/30472/2000–01 ದಿನಾಂಕ:23–02–2001 ಈ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲರಾಗಿರುತ್ತಾರೆ ಮತ್ತು ಸಂಘವನ್ನು ಪುನ:ಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲವೆಂದು ಪ್ರಸ್ತಾವನೆ ಸಲ್ಲಿಸಿ, ಸಂಘವನ್ನು ಸಮಾಪನೆಗೊಳಿಸಲು ಕೋರಿರುತ್ತಾರೆ. ಈ ಬಗ್ಗೆ ಉಲ್ಲೇಖ (2) ರ ನೋಟೀಸನ್ನು ಈ ಕಛೇರಿಯಿಂದ ನೀಡಿದ್ದು, ಸಂಘದ ಆಡಳಿತ ಮಂಡಳಿಯವರಿಗೆ ನೋಟೀಸು ಜಾರಿ ಮಾಡಿ ಸ್ವೀಕೃತಿ ಈ ಕಛೇರಿ ತಲುಪಿದ್ದು, ಆದಾಗ್ಯೂ ಅವರು ಯಾವುದೇ ಸಮಜಾಯಿಸಿ ಅಥವಾ ಪ್ರತಿಕ್ರಿಯೆಯನ್ನು ನೀಡದೇ ನಿರುತ್ಸಾಹ ತೋರಿಸಿರುತ್ತಾರೆ. ಈ ಸಂಘದಿಂದ ಸಂಘದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಇದರಿಂದ ಸಂಘವು

ಪುನ:ಶ್ಚೇತನಗೊಳಿಸುವ ಹಂತವನ್ನು ಮೀರಿರುತ್ತದೆ. ಸಂಘವನ್ನು ಇದೆ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಅಭಿಪ್ರಾಯ ಪಟ್ಟು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**"ಆದೇಶ"**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ನಂ:ಸಿಓ:201:ಸಿಎಲ್‌ಎಂ:2008/ ಬೆಂಗಳೂರು ದಿನಾಂಕ:27–05–2010 ಪ್ರಕಾರ ದತ್ತವಾದ ಅಧಿಕಾರದನ್ವಯ ಇಲ್ಯಾಸ್ ಉಲ್ಲಾ ಷರೀಫ್ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ಆದ ನಾನು ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಗೂಳ್ಯ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹಿರಿಯೂರು ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಅನ್ವಯ ಹಾಲು ವಿಸ್ತರಣಾಧಿಕಾರಿ, ಹಿರಿಯೂರು ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಮತ್ತು 74 ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ:31–01–2011 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಛೇರಿ**

**ನಂ.ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್:40/2010–11, ದಿನಾಂಕ:31ನೇ ಜನವರಿ 2011**

**ವಿಷಯ:** ಸ್ಥಗಿತಗೊಂಡಿರುವ ಸಿಂಗಾಪುರ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಚಿತ್ರದುರ್ಗ ತಾಲ್ಲೂಕು ಇದನ್ನು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರ ಪತ್ರದ ಸಂ:ಸನಿ:30:ಸಮಾಪನೆ: ಸಿಆರ್/32/10–11 ದಿನಾಂಕ: 16–11–2010.

2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮ ಸಂಖ್ಯೆ ದಿನಾಂಕ:19–11–2010.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ಉಲ್ಲೇಖ (1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಸಿಂಗಾಪುರ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಚಿತ್ರದುರ್ಗ ತಾಲ್ಲೂಕು ಸಂಘದ ನೋಂದಣಿ ಸಂಖ್ಯೆ:ಸನಿ/30/ಆರ್‌ಜಿಎನ್/ 26832/2000–01 ದಿನಾಂಕ:01–06–2000 ಈ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲರಾಗಿರುತ್ತಾರೆ ಮತ್ತು ಸಂಘವನ್ನು ಪುನ:ಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲವೆಂದು ಪ್ರಸ್ತಾವನೆ ಸಲ್ಲಿಸಿ, ಸಂಘವನ್ನು ಸಮಾಪನೆಗೊಳಿಸಲು ಕೋರಿರುತ್ತಾರೆ. ಈ ಬಗ್ಗೆ ಉಲ್ಲೇಖ (2) ರ ನೋಟೀಸನ್ನು ಈ ಕಛೇರಿಯಿಂದ ನೀಡಿದ್ದು, ಸಂಘದ ಆಡಳಿತ ಮಂಡಳಿಯವರಿಗೆ ನೋಟೀಸು ಜಾರಿ ಮಾಡಿ ಸ್ವೀಕೃತಿ ಈ ಕಛೇರಿ ತಲುಪಿದ್ದು, ಆದಾಗ್ಯೂ ಅವರು ಯಾವುದೇ ಸಮಜಾಯಿಸಿ ಅಥವಾ ಪ್ರತಿಕ್ರಿಯೆಯನ್ನು ನೀಡದೇ ನಿರುತ್ಸಾಹ ತೋರಿಸಿರುತ್ತಾರೆ. ಈ ಸಂಘದಿಂದ ಸಂಘದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಇದರಿಂದ ಸಂಘವು ಪುನ:ಶ್ಚೇತನಗೊಳಿಸುವ ಹಂತವನ್ನು ಮೀರಿರುತ್ತದೆ. ಸಂಘವನ್ನು ಇದೆ ರೀತಿಯ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಅಭಿಪ್ರಾಯ ಪಟ್ಟು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**"ಆದೇಶ"**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ನಂ:ಸಿಓ:201:ಸಿಎಲ್‌ಎಂ:2008/ ಬೆಂಗಳೂರು ದಿನಾಂಕ:27–05–2010 ಪ್ರಕಾರ ದತ್ತವಾದ ಅಧಿಕಾರದನ್ವಯ ಇಲ್ಯಾಸ್ ಉಲ್ಲಾ ಷರೀಫ್ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ಆದ ನಾನು ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಸಿಂಗಾಪುರ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಚಿತ್ರದುರ್ಗ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಅನ್ವಯ ಹಾಲು ವಿಸ್ತರಣಾಧಿಕಾರಿ, ಚಿತ್ರದುರ್ಗ ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಮತ್ತು 74 ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ:31–01–2011 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಛೇರಿ**

**ನಂ.ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್:62/2010-11, ದಿನಾಂಕ:31ನೇ ಜನವರಿ 2011**

**ವಿಷಯ:** ಸ್ಥಗಿತಗೊಂಡಿರುವ ಕೋಡಿಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಹೊಸದುರ್ಗ ತಾಲ್ಲೂಕು ಇದನ್ನು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರ ಪತ್ರದ ಸಂ:ಸನಿ:30:ಸಮಾಪನೆ: ಸಿಆರ್/61/10-11 ದಿನಾಂಕ: 10-12-2010.

2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮ ಸಂಖ್ಯೆ ದಿನಾಂಕ:14-12-2010.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ಉಲ್ಲೇಖ (1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಕೋಡಿಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಹೊಸದುರ್ಗ ತಾಲ್ಲೂಕು ಸಂಘದ ನೋಂದಣಿ ಸಂಖ್ಯೆ:ಸನಿ/30/ಆರ್‌ಜಿಎನ್/35216/2005-06 ದಿನಾಂಕ:07-07-2005 ಈ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲರಾಗಿರುತ್ತಾರೆ ಮತ್ತು ಸಂಘವನ್ನು ಪುನ:ಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲವೆಂದು ಪ್ರಸ್ತಾವನೆ ಸಲ್ಲಿಸಿ, ಸಂಘವನ್ನು ಸಮಾಪನೆಗೊಳಿಸಲು ಕೋರಿರುತ್ತಾರೆ. ಈ ಬಗ್ಗೆ ಉಲ್ಲೇಖ (2) ರ ನೊಟೀಸನ್ನು ಈ ಕಛೇರಿಯಿಂದ ನೀಡಿದ್ದು, ಸಂಘದ ಆಡಳಿತ ಮಂಡಳಿಯವರಿಗೆ ನೋಟೀಸು ಜಾರಿ ಮಾಡಿ ಸ್ವೀಕೃತಿ ಈ ಕಛೇರಿಗೆ ತಲುಪಿದ್ದು, ಆದಾಗ್ಯೂ ಅವರು ಯಾವುದೇ ಸಮಜಾಯಿಸಿ ಅಥವಾ ಪ್ರತಿಕ್ರಿಯೆಯನ್ನು ನೀಡದೇ ನಿರುತ್ಸಾಹ ತೋರಿಸಿರುತ್ತಾರೆ. ಈ ಸಂಘದಿಂದ ಸಂಘದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಇದರಿಂದ ಸಂಘವು ಪುನ:ಶ್ಚೇತನಗೊಳಿಸುವ ಹಂತವನ್ನು ಮೀರಿರುತ್ತದೆ. ಸಂಘವನ್ನು ಇದೆ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಅಭಿಪ್ರಾಯ ಪಟ್ಟು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**"ಆದೇಶ"**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ನಂ:ಸಿಓ:201:ಸಿಎಲ್‌ಎಂ:2008/ ಬೆಂಗಳೂರು ದಿನಾಂಕ:27-05-2010 ಪ್ರಕಾರ ದತ್ತವಾದ ಅಧಿಕಾರದನ್ವಯ ಇಲ್ಯಾಸ್ ಉಲ್ಲಾ ಷರೀಫ್ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ಆದ ನಾನು ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಕೋಡಿಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹೊಸದುರ್ಗ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಅನ್ವಯ ಹಾಲು ವಿಸ್ತರಣಾಧಿಕಾರಿ, ಹೊಸದುರ್ಗ ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಮತ್ತು 74 ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ:31-01-2011 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿಆರ್-498

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಛೇರಿ**

**ನಂ.ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್:69/2010-11, ದಿನಾಂಕ:31ನೇ ಜನವರಿ 2011**

**ವಿಷಯ:** ಸ್ಥಗಿತಗೊಂಡಿರುವ ಬೀಸನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಬೀಸನಹಳ್ಳಿ, ಹೊಸದುರ್ಗ ತಾಲ್ಲೂಕು ಇದನ್ನು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರ ಪತ್ರದ ಸಂ:ಸನಿ:30:ಸಮಾಪನೆ: ಸಿಆರ್/68/10-11 ದಿನಾಂಕ: 13-12-2010.

2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮ ಸಂಖ್ಯೆ ದಿನಾಂಕ:18-12-2010.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ಉಲ್ಲೇಖ (1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಬೀಸನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಬೀಸನಹಳ್ಳಿ, ಹೊಸದುರ್ಗ ತಾಲ್ಲೂಕು ಸಂಘದ ನೋಂದಣಿ ಸಂಖ್ಯೆ:ಸನಿ/30/09/ಆರ್‌ಎಸ್‌ಆರ್/26114/1999-2000 ದಿನಾಂಕ:24-06-1999 ಈ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲರಾಗಿರುತ್ತಾರೆ ಮತ್ತು ಸಂಘವನ್ನು ಪುನ:ಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲವೆಂದು ಪ್ರಸ್ತಾವನೆ ಸಲ್ಲಿಸಿ, ಸಂಘವನ್ನು ಸಮಾಪನೆಗೊಳಿಸಲು ಕೋರಿರುತ್ತಾರೆ. ಈ ಬಗ್ಗೆ ಉಲ್ಲೇಖ (2) ರ ನೊಟೀಸನ್ನು ಈ

ಕಛೇರಿಯಿಂದ ನೀಡಿದ್ದು, ಸಂಘದ ಆಡಳಿತ ಮಂಡಳಿಯವರಿಗೆ ನೋಟೀಸು ಜಾರಿ ಮಾಡಿ ಸ್ವೀಕೃತಿ ಈ ಕಛೇರಿ ತಲುಪಿದ್ದು, ಆದಾಗ್ಯೂ ಅವರು ಯಾವುದೇ ಸಮಜಾಯಿಸಿ ಅಥವಾ ಪ್ರತಿಕ್ರಿಯೆಯನ್ನು ನೀಡದೇ ನಿರುತ್ಸಾಹ ತೋರಿಸಿರುತ್ತಾರೆ. ಈ ಸಂಘದಿಂದ ಸಂಘದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಇದರಿಂದ ಸಂಘವು ಪುನ:ಶ್ಚೇತನಗೊಳಿಸುವ ಹಂತವನ್ನು ಮೀರಿರುತ್ತದೆ. ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಅಭಿಪ್ರಾಯ ಪಟ್ಟು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**"ಆದೇಶ"**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ನಂ:ಸಿಓ:201:ಸಿಎಲ್ಎಂ:2008/ ಬೆಂಗಳೂರು ದಿನಾಂಕ:27–05–2010 ಪ್ರಕಾರ ದತ್ತವಾದ ಅಧಿಕಾರದನ್ವಯ ಇಲ್ಯಾಸ್ ಉಲ್ಲಾ ಷರೀಫ್ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ಆದ ನಾನು ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಬೀಸನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಬೀಸನಹಳ್ಳಿ, ಹೊಸದುರ್ಗ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಅನ್ವಯ ಹಾಲು ವಿಸ್ತರಣಾಧಿಕಾರಿ, ಹೊಸದುರ್ಗ ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಮತ್ತು 74 ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ:31–01–2011 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಛೇರಿ**

**ನಂ.ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್:61/2010–11, ದಿನಾಂಕ:21ನೇ ಮಾರ್ಚ್ 2011**

**ವಿಷಯ:** ಸ್ಥಗಿತಗೊಂಡಿರುವ ಮಳಲಿ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಮಳಲಿ, ಹೊಸದುರ್ಗ ತಾಲ್ಲೂಕು ಇದನ್ನು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರ ಪತ್ರದ ಸಂ:ಸನಿ:30:ಸಮಾಪನೆ: ಸಿಆರ್/56/10–11 ದಿನಾಂಕ: 10–12–2010.

2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮ ಸಂಖ್ಯೆ ದಿನಾಂಕ:14–12–2010.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ಉಲ್ಲೇಖ (1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮಳಲಿ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಮಳಲಿ, ಹೊಸದುರ್ಗ ತಾಲ್ಲೂಕು ಸಂಘದ ನೋಂದಣಿ ಸಂಖ್ಯೆ:ಸನಿ30/ಆರ್‌ಜಿಎನ್/35242/2005–06 ದಿನಾಂಕ:14–02–2006 ಈ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲರಾಗಿರುತ್ತಾರೆ ಮತ್ತು ಸಂಘವನ್ನು ಪುನ:ಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲವೆಂದು ಪ್ರಸ್ತಾವನೆ ಸಲ್ಲಿಸಿ, ಸಂಘವನ್ನು ಸಮಾಪನೆಗೊಳಿಸಲು ಕೋರಿರುತ್ತಾರೆ. ಈ ಬಗ್ಗೆ ಉಲ್ಲೇಖ (2) ರ ನೋಟೀಸನ್ನು ಈ ಕಛೇರಿಯಿಂದ ನೀಡಿದ್ದು, ಸಂಘದ ಆಡಳಿತ ಮಂಡಳಿಯವರಿಗೆ ನೋಟೀಸು ಜಾರಿ ಮಾಡಿ ಸ್ವೀಕೃತಿ ಈ ಕಛೇರಿಗೆ ತಲುಪಿದ್ದು, ಆದಾಗ್ಯೂ ಅವರು ಯಾವುದೇ ಸಮಜಾಯಿಸಿ ಅಥವಾ ಪ್ರತಿಕ್ರಿಯೆಯನ್ನು ನೀಡದೇ ನಿರುತ್ಸಾಹ ತೋರಿಸಿರುತ್ತಾರೆ. ಈ ಸಂಘದಿಂದ ಸಂಘದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಇದರಿಂದ ಸಂಘವು ಪುನ:ಶ್ಚೇತನಗೊಳಿಸುವ ಹಂತವನ್ನು ಮೀರಿರುತ್ತದೆ. ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಅಭಿಪ್ರಾಯ ಪಟ್ಟು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**"ಆದೇಶ"**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ನಂ:ಸಿಓ:201:ಸಿಎಲ್ಎಂ:2008/ ಬೆಂಗಳೂರು ದಿನಾಂಕ:27–05–2010 ಪ್ರಕಾರ ದತ್ತವಾದ ಅಧಿಕಾರದನ್ವಯ ಇಲ್ಯಾಸ್ ಉಲ್ಲಾ ಷರೀಫ್ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ಆದ ನಾನು ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಮಳಲಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮಳಲಿ, ಹೊಸದುರ್ಗ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಅನ್ವಯ ಹಾಲು ವಿಸ್ತರಣಾಧಿಕಾರಿ, ಹೊಸದುರ್ಗ ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಮತ್ತು 74 ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ:21–03–2011 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಛೇರಿ**

**ನಂ.ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್:65/2010–11, ದಿನಾಂಕ:31ನೇ ಜನವರಿ 2011**

**ವಿಷಯ:** ಸ್ಥಗಿತಗೊಂಡಿರುವ ಬಸ್ತಿಹಳ್ಳಿ ವಿದ್ಯಾರ್ಥಿ ಬಳಕೆದಾರರ ಸಹಕಾರ ಸಂಘ ನಿ. ಬಸ್ತಿಹಳ್ಳಿ, ಚಿತ್ರದುರ್ಗ ತಾಲ್ಲೂಕು ಇದನ್ನು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರ ಪತ್ರದ ಸಂ:ಸನಿ:30:ಸಮಾಪನೆ: ಸಿಆರ್:65/10–11 ದಿನಾಂಕ: 10–12–2010.

2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮ ಸಂಖ್ಯೆ ದಿನಾಂಕ:14–12–2010.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ಉಲ್ಲೇಖ (1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಬಸ್ತಿಹಳ್ಳಿ ವಿದ್ಯಾರ್ಥಿ ಬಳಕೆದಾರರ ಸಹಕಾರ ಸಂಘ ನಿ. ಬಸ್ತಿಹಳ್ಳಿ, ಚಿತ್ರದುರ್ಗ ತಾಲ್ಲೂಕು ಸಂಘದ ನೋಂದಣಿ ಸಂಖ್ಯೆ:ಎಆರ್:30/15917/1988–89 ದಿನಾಂಕ:26–05–1988 ಈ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲರಾಗಿರುತ್ತಾರೆ ಮತ್ತು ಸಂಘವನ್ನು ಪುನ:ಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲವೆಂದು ಪ್ರಸ್ತಾವನೆ ಸಲ್ಲಿಸಿ, ಸಂಘವನ್ನು ಸಮಾಪನೆಗೊಳಿಸಲು ಕೋರಿರುತ್ತಾರೆ. ಈ ಬಗ್ಗೆ ಉಲ್ಲೇಖ (2) ರ ನೋಟೀಸನ್ನು ಈ ಕಛೇರಿಯಿಂದ ನೀಡಿದ್ದು, ಸಂಘದ ಆಡಳಿತ ಮಂಡಳಿಯವರಿಗೆ ನೋಟೀಸು ಜಾರಿ ಮಾಡಿ ಸ್ವೀಕೃತಿ ಈ ಕಛೇರಿಗೆ ತಲುಪಿದ್ದು, ಆದಾಗ್ಯೂ ಅವರು ಯಾವುದೇ ಸಮಜಾಯಿಸಿ ಅಥವಾ ಪ್ರತಿಕ್ರಿಯೆಯನ್ನು ನೀಡದೇ ನಿರುತ್ಸಾಹ ತೋರಿಸಿರುತ್ತಾರೆ. ಈ ಸಂಘದಿಂದ ಸಂಘದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಇದರಿಂದ ಸಂಘವು ಪುನ:ಶ್ಚೇತನಗೊಳಿಸುವ ಹಂತವನ್ನು ಮೀರಿರುತ್ತದೆ. ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಅಭಿಪ್ರಾಯ ಪಟ್ಟು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**"ಆದೇಶ"**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ನಂ:ಸಿಓ:201:ಸಿಎಲ್‌ಎಂ:2008/ ಬೆಂಗಳೂರು ದಿನಾಂಕ:27–05–2010 ಪ್ರಕಾರ ದತ್ತವಾದ ಅಧಿಕಾರದನ್ವಯ ಇಲ್ಯಾಸ್ ಉಲ್ಲಾ ಷರೀಫ್ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ಆದ ನಾನು ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಬಸ್ತಿಹಳ್ಳಿ ವಿದ್ಯಾರ್ಥಿ ಬಳಕೆದಾರರ ಸಹಕಾರ ಸಂಘ ನಿ. ಬಸ್ತಿಹಳ್ಳಿ, ಚಿತ್ರದುರ್ಗ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಅನ್ವಯ ಸಹಕಾರ ಸಂಘಗಳ ನಿರೀಕ್ಷಕರು, ಚಿತ್ರದುರ್ಗ ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಮತ್ತು 74 ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವ ಸಹಿ ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ:31–01–2011 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿಆರ್–499

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಛೇರಿ**

**ನಂ.ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್:71/2010–11, ದಿನಾಂಕ:31ನೇ ಜನವರಿ 2011**

**ವಿಷಯ:** ಸ್ಥಗಿತಗೊಂಡಿರುವ ಬೆಲಗೂರು ಹಾಲು ಉತ್ಪಾದಕರ ಸಹಕಾರ ಸಂಘ ನಿ. ಬೆಲಗೂರು, ಹೊಸದುರ್ಗ ತಾಲ್ಲೂಕು ಇದನ್ನು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರ ಪತ್ರದ ಸಂ:ಸನಿ:30:ಸಮಾಪನೆ: ಸಿಆರ್/67/10–11 ದಿನಾಂಕ: 13–12–2010.

2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮ ಸಂಖ್ಯೆ ದಿನಾಂಕ:18–12–2010.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ಉಲ್ಲೇಖ (1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಬೆಲಗೂರು ಹಾಲು ಉತ್ಪಾದಕರ ಸಹಕಾರ ಸಂಘ ನಿ. ಬೆಲಗೂರು, ಹೊಸದುರ್ಗ ತಾಲ್ಲೂಕು ಸಂಘದ ನೋಂದಣಿ ಸಂಖ್ಯೆ:ಎ.ಆರ್./31/18820/

1991–92 ದಿನಾಂಕ:14–03–1991 ಈ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲರಾಗಿರುತ್ತಾರೆ ಮತ್ತು ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲವೆಂದು ಪ್ರಸ್ತಾವನೆ ಸಲ್ಲಿಸಿ, ಸಂಘವನ್ನು ಸಮಾಪನೆಗೊಳಿಸಲು ಕೋರಿರುತ್ತಾರೆ. ಈ ಬಗ್ಗೆ ಉಲ್ಲೇಖ (2) ರ ನೋಟೀಸನ್ನು ಈ ಕಛೇರಿಯಿಂದ ನೀಡಿದ್ದು, ಸಂಘದ ಆಡಳಿತ ಮಂಡಳಿಯವರಿಗೆ ನೋಟೀಸು ಜಾರಿ ಮಾಡಿ ಸ್ವೀಕೃತಿ ಈ ಕಛೇರಿಗೆ ತಲುಪಿದ್ದು, ಆದಾಗ್ಯೂ ಅವರು ಯಾವುದೇ ಸಮಜಾಯಿಸಿ ಅಥವಾ ಪ್ರತಿಕ್ರಿಯೆಯನ್ನು ನೀಡದೇ ನಿರುತ್ಸಾಹ ತೋರಿಸಿರುತ್ತಾರೆ. ಈ ಸಂಘದಿಂದ ಸಂಘದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಇದರಿಂದ ಸಂಘವು ಪುನಃಶ್ಚೇತನಗೊಳಿಸುವ ಹಂತವನ್ನು ಮೀರಿರುತ್ತದೆ. ಸಂಘವನ್ನು ಇದೆ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಅಭಿಪ್ರಾಯ ಪಟ್ಟು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**"ಆದೇಶ"**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ನಂ:ಸಿಓ:201:ಸಿಎಲ್ಎಂ:2008/ ಬೆಂಗಳೂರು ದಿನಾಂಕ:27–05–2010 ಪ್ರಕಾರ ದತ್ತವಾದ ಅಧಿಕಾರದನ್ವಯ ಇಲ್ಯಾಸ್ ಉಲ್ಲಾ ಷರೀಫ್ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ಆದ ನಾನು ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಬೆಲಗೂರು ಹಾಲು ಉತ್ಪಾದಕರ ಸಹಕಾರ ಸಂಘ ನಿ. ಬೆಲಗೂರು, ಹೊಸದುರ್ಗ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಅನ್ವಯ ಹಾಲು ವಿಸ್ತರಣಾಧಿಕಾರಿ, ಹೊಸದುರ್ಗ ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಮತ್ತು 74 ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ:31–01–2011 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಛೇರಿ**

**ನಂ.ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್:73/2010–11, ದಿನಾಂಕ:31ನೇ ಜನವರಿ 2011**

**ವಿಷಯ:** ಸ್ಥಗಿತಗೊಂಡಿರುವ ಬುರುಡೆಕಟ್ಟೆ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಬುರುಡೆಕಟ್ಟೆ, ಹೊಸದುರ್ಗ ತಾಲ್ಲೂಕು ಇದನ್ನು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರ ಪತ್ರದ ಸಂ:ಸನಿ:30:ಸಮಾಪನೆ: ಸಿಆರ್/66/10–11 ದಿನಾಂಕ: 13–12–2010.

2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮ ಸಂಖ್ಯೆ ದಿನಾಂಕ:18–12–2010.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ಉಲ್ಲೇಖ (1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಬುರುಡೆಕಟ್ಟೆ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಬುರುಡೆಕಟ್ಟೆ, ಹೊಸದುರ್ಗ ತಾಲ್ಲೂಕು ಸಂಘದ ನೋಂದಣಿಸಂಖ್ಯೆ:ಎ.ಆರ್./31/18626/ 1991–92 ದಿನಾಂಕ:19–09–1991 ಈ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲರಾಗಿರುತ್ತಾರೆ ಮತ್ತು ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲವೆಂದು ಪ್ರಸ್ತಾವನೆ ಸಲ್ಲಿಸಿ, ಸಂಘವನ್ನು ಸಮಾಪನೆಗೊಳಿಸಲು ಕೋರಿರುತ್ತಾರೆ. ಈ ಬಗ್ಗೆ ಉಲ್ಲೇಖ (2) ರ ನೋಟೀಸನ್ನು ಈ ಕಛೇರಿಯಿಂದ ನೀಡಿದ್ದು, ಸಂಘದ ಆಡಳಿತ ಮಂಡಳಿಯವರಿಗೆ ನೋಟೀಸು ಜಾರಿ ಮಾಡಿ ಸ್ವೀಕೃತಿ ಈ ಕಛೇರಿಗೆ ತಲುಪಿದ್ದು, ಆದಾಗ್ಯೂ ಅವರು ಯಾವುದೇ ಸಮಜಾಯಿಸಿ ಅಥವಾ ಪ್ರತಿಕ್ರಿಯೆಯನ್ನು ನೀಡದೇ ನಿರುತ್ಸಾಹ ತೋರಿಸಿರುತ್ತಾರೆ. ಈ ಸಂಘದಿಂದ ಸಂಘದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಇದರಿಂದ ಸಂಘವು ಪುನಃಶ್ಚೇತನಗೊಳಿಸುವ ಹಂತವನ್ನು ಮೀರಿರುತ್ತದೆ. ಸಂಘವನ್ನು ಇದೆ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಅಭಿಪ್ರಾಯ ಪಟ್ಟು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**"ಆದೇಶ"**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ನಂ:ಸಿಓ:201:ಸಿಎಲ್ಎಂ:2008/ ಬೆಂಗಳೂರು ದಿನಾಂಕ:27–05–2010 ಪ್ರಕಾರ ದತ್ತವಾದ ಅಧಿಕಾರದನ್ವಯ ಇಲ್ಯಾಸ್ ಉಲ್ಲಾ ಷರೀಫ್

ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ಆದ ನಾನು ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಬುರುಡೆಕಟ್ಟೆ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಬುರುಡೆಕಟ್ಟೆ, ಹೊಸದುರ್ಗ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಅನ್ವಯ ಹಾಲು ವಿಸ್ತರಣಾಧಿಕಾರಿ, ಹೊಸದುರ್ಗ ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಮತ್ತು 74 ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ:31–01–2011 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಛೇರಿ**

**ನಂ.ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್:44/2010–11, ದಿನಾಂಕ:31ನೇ ಜನವರಿ 2011**

**ವಿಷಯ:** ಸ್ಥಗಿತಗೊಂಡಿರುವ ಕೂನಿಕೆರೆ ಚಾಪೆ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ ನಿ. ಕೂನಿಕೆರೆ ಹಿರಿಯೂರು ತಾಲ್ಲೂಕು ಇದನ್ನು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರ ಪತ್ರದ ಸಂ:ಸನಿ:30:ಸಮಾಪನೆ: ಸಿಆರ್/40/10–11 ದಿನಾಂಕ: 16–11–2010.

2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮ ಸಂಖ್ಯೆ ದಿನಾಂಕ:19–11–2010.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ಉಲ್ಲೇಖ (1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಕೂನಿಕೆರೆ ಚಾಪೆ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ ನಿ. ಕೂನಿಕೆರೆ ಹಿರಿಯೂರು ತಾಲ್ಲೂಕು ಸಂಘದ ನೋಂದಣಿ ಸಂಖ್ಯೆ:ಎ.ಆರ್./30/ಆರ್.ಸಿ.ಎಸ್./320/3207/1986–87 ದಿನಾಂಕ:27–08–1986 ಈ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲರಾಗಿರುತ್ತಾರೆ ಮತ್ತು ಸಂಘವನ್ನು ಪುನ:ಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲವೆಂದು ಪ್ರಸ್ತಾವನೆ ಸಲ್ಲಿಸಿ, ಸಂಘವನ್ನು ಸಮಾಪನೆಗೊಳಿಸಲು ಕೋರಿರುತ್ತಾರೆ. ಈ ಬಗ್ಗೆ ಉಲ್ಲೇಖ (2) ರ ನೋಟೀಸನ್ನು ಈ ಕಛೇರಿಯಿಂದ ನೀಡಿದ್ದು, ಸಂಘದ ಆಡಳಿತ ಮಂಡಳಿಯವರಿಗೆ ನೋಟೀಸು ಜಾರಿ ಮಾಡಿ ಸ್ವೀಕೃತಿ ಈ ಕಛೇರಿಗೆ ತಲುಪಿದ್ದು, ಆದಾಗ್ಯೂ ಅವರು ಯಾವುದೇ ಸಮಜಾಯಿಸಿ ಅಥವಾ ಪ್ರತಿಕ್ರಿಯೆಯನ್ನು ನೀಡದೇ ನಿರುತ್ಸಾಹ ತೋರಿಸಿರುತ್ತಾರೆ. ಈ ಸಂಘದಿಂದ ಸಂಘದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಇದರಿಂದ ಸಂಘವು ಪುನ:ಶ್ಚೇತನಗೊಳಿಸುವ ಹಂತವನ್ನು ಮೀರಿರುತ್ತದೆ. ಸಂಘವನ್ನು ಇದೆ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಅಭಿಪ್ರಾಯ ಪಟ್ಟು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**"ಆದೇಶ"**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ನಂ:ಸಿಓ:201:ಸಿಎಲ್‌ಎಂ:2008/ ಬೆಂಗಳೂರು ದಿನಾಂಕ:27–05–2010 ಪ್ರಕಾರ ದತ್ತವಾದ ಅಧಿಕಾರದನ್ವಯ ಇಲ್ಯಾಸ್ ಉಲ್ಲಾ ಷರೀಫ್ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ಆದ ನಾನು ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಕೂನಿಕೆರೆ ಚಾಪೆ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ ನಿ. ಕೂನಿಕೆರೆ ಹಿರಿಯೂರು ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಅನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಹಿರಿಯೂರು ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಮತ್ತು 74 ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ:31–01–2011 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿಆರ್–495

**ಉದ್ಯೋಗ ಮತ್ತು ತರಬೇತಿ ಇಲಾಖೆ**

**ಜಂಟಿ ನಿರ್ದೇಶಕರು (ತರಬೇತಿ) ಮತ್ತು ಪದನಿಮಿತ್ತ ಜಂಟಿ ಶಿಶಿಕ್ಷು ಸಲಹೆಗಾರರ ವಿಭಾಗೀಯ ಕಚೇರಿ,**

**ಕೌಶಲ್ಯ ಭವನ, ಬಿ.ಜಿ. ರಸ್ತೆ, ಬೆಂಗಳೂರು-560029.**

**ಸಂ:ಬೆಂವಿಕ/ಎಟಿಎಸ್/ವಿವ-144/10-11, ದಿನಾಂಕ:29ನೇ ಜನವರಿ 2011**

**ಅಧಿಸೂಚನೆ**

**ವಿಷಯ:** ಬೆಂಗಳೂರು ವಿಭಾಗೀಯ ವ್ಯಾಪ್ತಿಯಲ್ಲಿ ಶಿಶಿಕ್ಷು ತರಬೇತಿ ಯೋಜನೆ (Apprenticeship Training Programme)ನ್ನು ಅನುಷ್ಠಾನಗೊಳಿಸುವ ಬಗ್ಗೆ

ಕೇಂದ್ರ ಕಾಯ್ದೆ ಆದ Apprentices Act, 1961 ಪ್ರಕಾರ ರಾಷ್ಟ್ರವ್ಯಾಪ್ತಿಯಲ್ಲಿ ಶಿಶಿಕ್ಷು ತರಬೇತಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಸದರಿ ಕಾಯ್ದೆಯನ್ನು ಅನುಷ್ಠಾನಗೊಳಿಸಲು ಕೇಂದ್ರ ಸರ್ಕಾರವು Apprentucesguol Rules 1991 ನ್ನು ಜಾರಿಗೆ ತಂದಿದೆ.

ರಾಜ್ಯದಲ್ಲಿ ಶಿಶಿಕ್ಷು ತರಬೇತಿ ಯೋಜನೆಯನ್ನು ಆಯುಕ್ತರು ಹಾಗೂ ಪದನಿಮಿತ್ತ ರಾಜ್ಯ ಶಿಶಿಕ್ಷು ಸಲಹೆಗಾರರು, ಉದ್ಯೋಗ ಮತ್ತು ತರಬೇತಿ ಇಲಾಖೆ, ಹಾಗೂ ನಾಲ್ಕು ವಿಭಾಗೀಯ ಕಛೇರಿಗಳ ಮುಖ್ಯಸ್ಥರಾದ ಜಂಟೀ ನಿರ್ದೇಶಕರು (ತ) ರವರ ಸಹಯೋಗದೊಂದಿಗೆ ಅನುಷ್ಠಾನಗೊಳಿಸಲಾಗುತ್ತಿದೆ. ವಿಭಾಗೀಯ ಕಛೇರಿ, ಬೆಂಗಳೂರು ವ್ಯಾಪ್ತಿಯಲ್ಲಿ 09 ಜಿಲ್ಲೆಗಳು ಬರುತ್ತವೆ. ಅವುಗಳು ಬೆಂಗಳೂರು (ನಗರ), ಬೆಂಗಳೂರು (ಗ್ರಾಮಾಂತರ), ತುಮಕೂರು, ಚಿತ್ರದುರ್ಗ ದಾವಣಗೆರೆ, ಶಿವಮೊಗ್ಗ, ಕೋಲಾರ, ರಾಮನಗರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳು. ಈ ಜಿಲ್ಲೆಗಳಲ್ಲಿ ಅಸ್ತಿತ್ವದಲ್ಲಿರುವ ಕೈಗಾರಿಕೋದ್ಯಮದಲ್ಲಿ Apprentices Act, 1961ರ ಅನುಸಾರ ಶಿಶಿಕ್ಷು ತರಬೇತಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ.

ಪ್ರಾಥಮಿಕವಾಗಿ ಕೈಗಾರಿಕೋದ್ಯಮಗಳನ್ನು ಬೆಂಗಳೂರು ವಿಭಾಗೀಯ ಕಛೇರಿಯ ಸಹಾಯಕ ಶಿಶಿಕ್ಷು ಸಲಹೆಗಾರರು ಅಥವಾ ಕಿರಿಯ ಶಿಶಿಕ್ಷು ಸಲಹೆಗಾರರು ಸಮೀಕ್ಷಿಸಿ ಸದರಿಯವರ ವರದಿಯನ್ನು ಆಧರಿಸಿ ರಾಜ್ಯ ಶಿಶಿಕ್ಷು ಸಲಹೆಗಾರರು ಟ್ರೇಡ್ ಅಪ್ರೆಂಟೆಸ್‌ಗಳನ್ನು (ಶಿಶಿಕ್ಷುಗಳು) ನಿಗದಿಗೊಳಿಸುತ್ತಾರೆ. ಈ ಶಿಶಿಕ್ಷುಗಳ ಕರಾರುಗಳನ್ನು ವಿಭಾಗೀಯ ಕಛೇರಿಯಲ್ಲಿ ನೊಂದಾಯಿಸಿಕೊಂಡು ವಿವಿಧ designated trade ಗಳಲ್ಲಿ ಶಿಶಿಕ್ಷು ತರಬೇತಿಯನ್ನು ನೀಡಲಾಗುತ್ತಿದೆ.

ಕೈಗಾರಿಕೋದ್ಯಮಗಳನ್ನು ಕಾಲಕಾಲಕ್ಕೆ ಸಮೀಕ್ಷೆ, ಮರುಸಮೀಕ್ಷೆ ಪರಿವೀಕ್ಷಣೆ ನಡೆಸಿ ಕೈಗಾರಿಕೋದ್ಯಮಗಳಲ್ಲಿ ಲಭ್ಯವಿರುವ ಮೂಲ ಸೌಕರ್ಯ ಹಾಗೂ ಉದ್ಯೋಗಿಗಳನ್ನು (Man-power) ಆಧರಿಸಿ ಆಗಾಗ ಶಿಶಿಕ್ಷುಗಳ ನಿಗದಿಯನ್ನು ಪುನರ್ ನಿಗದಿ ಪಡಿಸಲಾಗುತ್ತದೆ.

ವಿಭಾಗೀಯ ಕಛೇರಿ, ಬೆಂಗಳೂರಿನ ಈ ಕೆಳಕಂಡ ಅಧಿಕಾರಿಗಳು ಬೆಂಗಳೂರು ವಿಭಾಗದ ವ್ಯಾಪ್ತಿಯಲ್ಲಿ ಬರುವ ಕೈಗಾರಿಕೋದ್ಯಮಗಳಲ್ಲಿ ಶಿಶಿಕ್ಷು ತರಬೇತಿ ಅನುಷ್ಠಾನಗೊಳಿಸಲು ಸಮೀಕ್ಷೆ, ಮರುಸಮೀಕ್ಷೆ, ಪರಿವೀಕ್ಷಣೆ ಮಾಡಲು ಅಧಿಕಾರವನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಶ್ರೀಯುತರು | ಪದನಾಮ |
|---|---|---|
| 1. | ಬಿ.ಎಸ್. ರಘುಪತಿ | ಜಂಟೀ ನಿರ್ದೇಶಕರು (ತರಬೇತಿ) ಮತ್ತು ಪದನಿಮಿತ್ತ ಜಂಟೀ ಶಿಶಿಕ್ಷು ಸಲಹೆಗಾರರು |
| 2. | ಟಿ.ಆರ್. ಲಕ್ಷ್ಮೀರಾಜಯ್ಯ | ಸಹಾಯಕ ಶಿಶಿಕ್ಷು ಸಲಹೆಗಾರರು |
| 3. | ಎಂ.ನಾಗರಾಜ | ಸಹಾಯಕ ಶಿಶಿಕ್ಷು ಸಲಹೆಗಾರರು |
| 4. | ಹನುಮಂತರಾಜ | ಸಹಾಯಕ ಶಿಶಿಕ್ಷು ಸಲಹೆಗಾರರು |
| 5. | ವಿ.ವಿಜಯಕುಮಾರ್ | ಕಿರಿಯ ಶಿಶಿಕ್ಷು ಸಲಹೆಗಾರರು |
| 6. | ಆರ್. ಜಯಂತ್ | ಕಿರಿಯ ಶಿಶಿಕ್ಷು ಸಲಹೆಗಾರರು |
| 7. | ಆರ್.ಭದ್ರಪ್ಪ | ಕಿರಿಯ ಶಿಶಿಕ್ಷು ಸಲಹೆಗಾರರು |

ಬೆಂಗಳೂರು ವಿಭಾಗೀಯ ವ್ಯಾಪ್ತಿಯಲ್ಲಿ ಬರುವ ಶಿಶಿಕ್ಷು ತರಬೇತಿ ಅನುಷ್ಠಾನಗೊಳಿಸುವ ಕೈಗಾರಿಕೋದ್ಯಮಗಳು ವಿಭಾಗೀಯ ಕಛೇರಿ, ಬೆಂಗಳೂರಿನಿಂದ ಸಮೀಕ್ಷೆ/ಮರುಸಮೀಕ್ಷೆಗೆ ಬರುವ ಅಧಿಕಾರಿಗಳಿಗೆ ಎಲ್ಲಾ ಸಹಕಾರ ನೀಡಲು ಈ ಮೂಲಕ ತಿಳಿಸಲಾಗಿದೆ.

ಜಂಟೀ ನಿರ್ದೇಶಕರು (ತರಬೇತಿ) ಮತ್ತು ಪದನಿಮಿತ್ತ
ಜಂಟಿ ಶಿಶಿಕ್ಷು ಸಲಹೆಗಾರರು ವಿಭಾಗೀಯ ಕಚೇರಿ
ಉದ್ಯೋಗ ಮತ್ತು ತರಬೇತಿ ಇಲಾಖೆ,
ಕೌಶಲ್ಯ ಭವನ, ಬೆಂಗಳೂರು-560029

ಪಿಆರ್-433

**ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ನಂ.ಎಲ್‌ಎನ್‌ಡಿ.ಸಿಆರ್.47/09-10, ದಿನಾಂಕ:13ನೇ ಏಪ್ರಿಲ್ 2011**

**ವಿಷಯ:** ಶ್ರೀನಿವಾಸಪುರ ತಾಲ್ಲೂಕು ರೋಣೂರು ಹೋಬಳಿ ರೋಣುರು ಗ್ರಾಮದ ಸ.ನಂ. 46ರ ಪೈಕಿ 1–00 ಹಾಗೂ ಸ.ನಂ. 48 ರ ಪೈಕಿ 0–34 ಗುಂಟೆ ಒಟ್ಟು 1–34 ಎಕರೆ ಸರ್ಕಾರಿ ತೋಪು ಜಮೀನನ್ನು ಸಾರ್ವಜನಿಕ ಆಸ್ಪತ್ರೆ ಕಟ್ಟಡಕ್ಕಾಗಿ ಮಂಜೂರು ಮಾಡುವ ಕುರಿತು.

**ಉಲ್ಲೇಖ:** ಸಹಾಯಕ ಕಮೀಷನರ್ ಕೋಲಾರ ರವರ ಪತ್ರ ಸಂಖ್ಯೆ ಎಲ್‌ಎನ್‌ಡಿ. ಸಿಆರ್. 130/09–10 ದಿನಾಂಕ: 1/1/10

2) ತಹಶೀಲ್ದಾರ್ ಶ್ರೀನಿವಾಸಪುರ ತಾಲ್ಲೂಕು ರವರ ಪತ್ರ ಸಂಖ್ಯೆ ಎಲ್‌ಎನ್‌ಡಿ. ಸಿಆರ್.57/09–10 ದಿನಾಂಕ:10/11/09 ಮತ್ತು ದಿನಾಂಕ:2/2/11.

**ಅಧಿಸೂಚನೆ**

**94ನೇ ನಿಯಮ 68(1) ನೇ ಪ್ರಕರಣದ ಮೇರೆಗೆ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಈ ಕೆಳಗೆ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಲಾದ ಶ್ರೀನಿವಾಸಪುರ ತಾಲ್ಲೂಕು ರೋಣುರು ಹೋಬಳಿ ರೋಣೂರು ಗ್ರಾಮದ ಸ.ನಂ. 46 ರ ಸರ್ಕಾರಿ ತೋಪು ಜಮೀನಿನ ಪೈಕಿ 1–00 ಎಕರೆ ಹಾಗೂ ಸ.ನಂ. 48 ರ ತೋಪು ಜಮೀನಿನ ಪೈಕಿ 0–34 ಗುಂಟೆ ಒಟ್ಟು 1–34 ಎಕರೆ ಜಮೀನು ಸಾರ್ವಜನಿಕ ಉಪಯೋಗಕ್ಕೆ ಸದರಿ ಉದ್ದೇಶಕ್ಕಾಗಿ ಅಗತ್ಯವಿಲ್ಲವೆಂದು ಕಂಡು ಬಂದಿರುವುದರಿಂದ ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮ 1964 ರ 68 ನೇ ಪ್ರಕರಣದ (1) ನೇ ಉಪಪ್ರಕರಣದಂತೆ ರಾಜ್ಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಉಲ್ಲೇಖದ ಸರ್ಕಾರದ ಪತ್ರದಂತೆ ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ ಆದ ನನಗೆ ಪ್ರತ್ಯಾಯೋಜನೆಯಗೊಂಡಿರುವುದರಿಂದ, ಸದರಿ ಅಧಿಕಾರವನ್ನು ಚಲಾಯಿಸಿ ಸದರಿ ಶ್ರೀನಿವಾಸಪುರ ತಾಲ್ಲೂಕು ರೋಣುರು ಹೋಬಳಿ ರೋಣೂರು ಗ್ರಾಮದ ಸ.ನಂ. 46 ರ ಸರ್ಕಾರಿ ತೋಪು ಜಮೀನಿನ ಪೈಕಿ 1–00 ಎಕರೆ ಹಾಗೂ ಸ.ನಂ. 48 ರ ತೋಪು ಜಮೀನಿನ ಪೈಕಿ 0–34 ಗುಂಟೆ ಒಟ್ಟು 1–34 ಎಕರೆ ಪ್ರದೇಶವು ಸದರಿ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸದರಿ ಜಮೀನಿನ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳಿಸಲು ಉದ್ದೇಶಿಸಿರುವುದಾಗಿ ಈ ಮೂಲಕ ಘೋಷಿಸುತ್ತೇನೆ.

ಸದರಿ ಶ್ರೀನಿವಾಸಪುರ ತಾಲ್ಲೂಕು ರೋಣುರು ಹೋಬಳಿ ರೋಣೂರು ಗ್ರಾಮದ ಸ.ನಂ. 46 ರ ಸರ್ಕಾರಿ ತೋಪು ಜಮೀನಿನ ಪೈಕಿ 1–00 ಎಕರೆ ಹಾಗೂ ಸ.ನಂ. 48 ರ ತೋಪು ಜಮೀನಿನ ಪೈಕಿ 0–34 ಗುಂಟೆ ಒಟ್ಟು 1–34 ಎಕರೆ ಪ್ರದೇಶದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕನು ಅಥವಾ ಯಾವುದೇ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ ತೊಂಭತ್ತು ದಿನಗಳೊಳಗಾಗಿ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು, ಅಂಥ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂಥ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಮು ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಈ ಕಛೇರಿಗೆ ಲಿಖಿತ ರೂಪದಲ್ಲಿ ತಿಳಿಸತಕ್ಕದ್ದು, ಮತ್ತು ಆಕ್ಷೇಪಣೆಗಳನ್ನು ಮತ್ತು ಕ್ಲೈಮುಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಪರಿಶೀಲಿಸಲಾಗುವುದು.

**ಅನುಸೂಚಿ**

| | | |
|---|---|---|
| ಜಿಲ್ಲೆ | : | ಕೋಲಾರ |
| ತಾಲ್ಲೂಕು | : | ಶ್ರೀನಿವಾಸಪುರ |
| ಹೋಬಳಿ | : | ರೋಣೂರು |
| ಗ್ರಾಮ | : | ರೋಣೂರು |

ಶ್ರೀನಿವಾಸಪುರ ತಾಲ್ಲೂಕು ರೋಣುರು ಹೋಬಳಿ ರೋಣೂರು ಗ್ರಾಮದ ಸ.ನಂ. 46 ರ ಸರ್ಕಾರಿ ತೋಪು ಜಮೀನಿನ ಪೈಕಿ 1–00 ಎಕರೆ ಹಾಗೂ ಸ.ನಂ. 48 ರ ತೋಪು ಜಮೀನಿನ ಪೈಕಿ 0–34 ಗುಂಟೆ ಒಟ್ಟು 1–34 ಎಕರೆ ಸಾರ್ವಜನಿಕರ ಹಕ್ಕು ನಿವೃತ್ತಿಗಾಗಿ ಪ್ರಸ್ತಾಪಿಸಲಾಗಿದೆ.

**ಚೆಕ್ಕುಬಂದಿ**

| | | ಸ.ನಂ. 46 | ಸ.ನಂ.48 |
|---|---|---|---|
| ಪೂರ್ವಕ್ಕೆ | : | ಸ.ನಂ. 47 ರ ಜಮೀನು | ಸರ್ಕಾರಿ ಕೆರೆ |
| ಪಶ್ಚಿಮಕ್ಕೆ | : | ಸ.ನಂ. 45 ರ ಜಮೀನು | ಸ.ನಂ. 47 ರ ಜಮೀನು |
| ಉತ್ತರಕ್ಕೆ | : | ಸ.ನಂ. 49 ರ ಜಮೀನು | ಸ.ನಂ. 49 ರ ಜಮೀನು |
| ದಕ್ಷಿಣಕ್ಕೆ | : | ಗ್ರಾಮಠಾಣಾ | ಸ.ನಂ. 82 ರ ಸರ್ಕಾರಿ ಜಮೀನು |

ಪಿಆರ್–434

ಜಿಲ್ಲಾಧಿಕಾರಿಗಳು
ಕೋಲಾರ ಜಿಲ್ಲೆ

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಗಳು**

**ವಿಷಯ:** ಸಮಾಪನೆಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಮಾಯಕೊಂಡ, ದಾವಣಗೆರೆ ತಾಲ್ಲೂಕು ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ:ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–01/2009–10 ದಿನಾಂಕ:25–09–2009, ಮತ್ತು ದಿನಾಂಕ:13–08–2010.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪ ವಿಭಾಗ, ದಾವಣಗೆರೆ ಇವರ ಪತ್ರ ಸಂ:ಸನಿ31/ ಸಮಾಪನೆ/ಹಾಉಸಸಂನಿ ಮಾಯಕೊಂಡ/ಸಿಆರ್– /2009–10 ದಿನಾಂಕ:26–02–2011.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ:ಎಆರ್–31/ ಆರ್‌ಜಿಎನ್/26073/1998–99 ದಿನಾಂಕ:06–11–1998 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರು ದಿನಾಂಕ:25–09–2009 ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, 2ನೇ ವೃತ್ತ, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ನಂತರ ದಿನಾಂಕ:13–08–2010 ರಂದು ಸಮಾಪನಾಧಿಕಾರಿಗಳನ್ನು ಬದಲಾಯಿಸಿ, ಶ್ರೀ.ಟಿ. ಚನ್ನಬಸಪ್ಪ, ಹಿರಿಯ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಚೇರಿ, ಹರಪನಹಳ್ಳಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸಂಖ್ಯೆ:ಡಿಆರ್:ಡಿವಿಜಿ:/ನೋಸಂರ/ಸಿಆರ್– /2009–10, ದಿನಾಂಕ:28ನೇ ಫೆಬ್ರವರಿ 2011**

**ಆದೇಶ**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ:21–11–2001 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಬಿ. ಕುಬೇರಪ್ಪ ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮಾಯಕೊಂಡ, ದಾವಣಗೆರೆ ತಾಲ್ಲೂಕು ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಚೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:28–02–2011 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು

ಪಿಆರ್–436 ದಾವಣಗೆರೆ ಜಿಲ್ಲೆ, ದಾವಣಗೆರೆ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಗಳು**

**ವಿಷಯ:** ಸಮಾಪನೆಗೊಂಡಿರುವ ಹುಲಿಕಟ್ಟೆ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಹುಲಿಕಟ್ಟೆ, ದಾವಣಗೆರೆ ತಾಲ್ಲೂಕು ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ:ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–56/2005–06 ದಿನಾಂಕ:10–07–2006, ಮತ್ತು ದಿನಾಂಕ:13–08–2010.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪ ವಿಭಾಗ, ದಾವಣಗೆರೆ ಇವರ ಪತ್ರ ಸಂ:ಸನಿ31/ ಸಮಾಪನೆ/ಹಾಉಸಸಂನಿ ಹುಲಿಕಟ್ಟೆ/ಸಿಆರ್– /2005–06 ದಿನಾಂಕ:29–03–2011.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ:ಎಆರ್–31/ ಆರ್‌ಜಿಎನ್/23117/1996–97 ದಿನಾಂಕ:22–03–1997 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರಲ್ಲಿ ಸಹಕಾರ ಸಂಘಗಳ

ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರು ದಿನಾಂಕ:10-07-2006 ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, 1ನೇ ವೃತ್ತ, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ನಂತರ ದಿನಾಂಕ:13-08-2010 ರಂದು ಸಮಾಪನಾಧಿಕಾರಿಗಳನ್ನು ಬದಲಾಯಿಸಿ, ಶ್ರೀ.ಟಿ. ಚನ್ನಬಸಪ್ಪ, ಸ.ಸಂ.ಗಳ ಹಿರಿಯ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಚೇರಿ, ಹರಪನಹಳ್ಳಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸಂಖ್ಯೆ:ಡಿಆರ್:ಡಿವಿಜಿ:/ನೋಸಂರ/ಸಿಆರ್-56 /2005-06, ದಿನಾಂಕ:31ನೇ ಮಾರ್ಚ್ 2011**

**ಆದೇಶ**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್ಎಂ:2001, ದಿನಾಂಕ:21-11-2001 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಬಿ. ಕುಬೇರಪ್ಪ ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಹುಲಿಕಟ್ಟೆ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹುಲಿಕಟ್ಟೆ, ದಾವಣಗೆರೆ ತಾಲ್ಲೂಕು ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ. ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಚೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:31-03-2011 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿಆರ್-437

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಗಳು**

**ವಿಷಯ:** ಸಮಾಪನೆಗೊಂಡಿರುವ ಅಗಸನಕಟ್ಟೆ ಖಾದಿ ಗ್ರಾಮೋದ್ಯೋಗ ಸಹಕಾರ ಸಂಘ ನಿ, ದಾವಣಗೆರೆ, ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ:ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್-19ಎ/1984-85 ದಿನಾಂಕ:29-11-2003, ಮತ್ತು ದಿನಾಂಕ:29-11-2010.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪ ವಿಭಾಗ, ದಾವಣಗೆರೆ ಇವರ ಪತ್ರ ಸಂ:ಸನಿ31/ ಸಮಾಪನೆ/ಅಖಾಗ್ರಾಸಸಂನಿ/ಸಿಆರ್- /1984-85 ದಿನಾಂಕ:25-02-2011.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ:ಎಆರ್‌ಸಿ/100/ 1962-63 ದಿನಾಂಕ:11-06-1963 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರು ದಿನಾಂಕ:29-11-2003 ರ ಆದೇಶದಲ್ಲಿ ಸಮಾಪನೆಗೊಳಿಸಿ ಜಿಲ್ಲಾಧಿಕಾರಿಗಳು, ಕರ್ನಾಟಕ ಖಾದಿ ಗ್ರಾಮೋದ್ಯೋಗ ಮಂಡಳಿ, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ನಂತರ ದಿನಾಂಕ:29-11-2010 ರಂದು ಸಮಾಪನಾಧಿಕಾರಿಗಳನ್ನು ಬದಲಾಯಿಸಿ, ಶ್ರೀ.ಟಿ. ಚನ್ನಬಸಪ್ಪ, ಸ.ಸಂ.ಗಳ ಹಿರಿಯ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಚೇರಿ, ಹರಪನಹಳ್ಳಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸಂಖ್ಯೆ:ಡಿಆರ್:ಡಿವಿಜಿ:/ನೋಸಂರ/ಸಿಆರ್-19 /1984-85, ದಿನಾಂಕ:28ನೇ ಫೆಬ್ರವರಿ 2011**

**ಆದೇಶ**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್ಎಂ:2001, ದಿನಾಂಕ:21-11-2001 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಬಿ. ಕುಬೇರಪ್ಪ ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಅಗಸನಕಟ್ಟೆ ಖಾದಿ ಗ್ರಾಮೋದ್ಯೋಗ ಸಹಕಾರ ಸಂಘ ನಿ, ದಾವಣಗೆರೆ ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ. ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ

ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಚೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:28–02–2011 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿಆರ್–438

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯ**

**ವಿಷಯ:** ಸಮಾಪನೆಗೊಂಡಿರುವ ಪರಿಶಿಷ್ಟ ಜಾತಿ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ, ಗಾಂಧಿನಗರ, ದಾವಣಗೆರೆ, ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(3) ರನ್ವಯ ಪುನ:ಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:** 1) ಈ ಕಚೇರಿ ಆದೇಶ ಸಂಖ್ಯೆ:ಡಿಅರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–49/2005–06 ದಿನಾಂಕ:28–06–2006.
**2)** ಈ ಕಚೇರಿ ಆದೇಶ ಸಂಖ್ಯೆ:ಡಿಅರ್/ಡಿವಿಜಿ/ಸಮಾಪನೆ/2010–11 ದಿನಾಂಕ:13–0–2010.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪತ್ರ ಸಂ:ಸನಿ31/ಸಮಾಪನೆ/ಪ.ಜಾ.ಮ.ವಿ.ಸ.ಸಂ.ನಿ/ ಸಿಆರ್– /05–06 ದಿನಾಂಕ:25–02–2011.

**ಪ್ರಸ್ತಾವನೆ:**

ಪ್ರಸ್ತುತ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ವಿಷಯ ಸೂಚಿತ ಸಂಘವು ಕಳೆದ ಕೆಲವು ವರ್ಷಗಳಿಂದ ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಈ ಕಚೇರಿಯ ಆದೇಶದ ರೀತ್ಯಾ ಸಮಾಪನೆಗೊಳಿಸಿ ಶ್ರೀ ಎಸ್.ಟಿ. ರಾಜಪ್ಪ, ನಿರೀಕ್ಷಕರು, ಸಹಕಾರ ಸಂಘಗಳ ಉಪ ನಿಬಂಧಕರ ಕಚೇರಿ, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಆದರೆ ಸಮಾಪನಾಧಿಕಾರಿಗಳು ವರ್ಗಾವಣೆಗೊಂಡ ಹಿನ್ನೆಲೆಯಲ್ಲಿ ಉಲ್ಲೇಖ (2)ರ ಈ ಕಚೇರಿ ಆದೇಶದಲ್ಲಿ ಸಮಾಪನಾಧಿಕಾರಿಗಳನ್ನು ಬದಲಾಯಿಸಿ ಶ್ರೀ ಟಿ. ಚನ್ನಬಸಪ್ಪ, ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಚೇರಿ ಹರಪನಹಳ್ಳಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಉಲ್ಲೇಖ 3ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ದಿನಾಂಕ:01–02–2011 ರಂದು ಸಂಘದ ಸದಸ್ಯರು ಸಭೆ ಸೇರಿ ಸಭೆಯಲ್ಲಿ ಸಂಘದ ಸದಸ್ಯರ ಹಿತದೃಷ್ಟಿಯಿಂದ ಸಂಘದ ಕಾರ್ಯಚಟುವಟಿಕೆಗಳನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡಿಕೊಡಲು ಸರ್ವಾನುಮತದಿಂದ ಇಲಾಖಾಧಿಕಾರಿಗಳನ್ನು ಕೋರಲು ತೀರ್ಮಾನ ಕೈಗೊಂಡಿರುತ್ತಾರೆಂದು ತಿಳಿಸುತ್ತಾ, ಸಂಘದ ಸಮಾಪನಾ ಆದೇಶವನ್ನು ರದ್ದುಪಡಿಸಿ, ಸದರಿ ಸಂಘವನ್ನು ಸಂಘದ ಸದಸ್ಯರ ಹಿತದೃಷ್ಟಿಯಿಂದ ಪುನ:ಶ್ಚೇತನಕ್ಕೆ ಅವಕಾಶ ಮಾಡಿಕೊಡಲು ಕೋರಿರುತ್ತಾರೆ. ಹಾಗೂ ದಿನಾಂಕ: 01–02–2011 ರ ಸಭೆಯಲ್ಲಿ ಕೈಗೊಂಡಿರುವ ನಿರ್ಣಯ 3,4,5ರಂತೆ ಸಂಘವು ರೂಪಿಸಿಕೊಂಡಿರುವ ಕ್ರಿಯಾ ಯೋಜನೆ ಪ್ರಕಾರ ಕಾರ್ಯನಿರ್ವಹಿಸಲು ಕಟ್ಟು ನಿಟ್ಟಾಗಿ ಅನುಷ್ಠಾನಕ್ಕೆ ತರಲು ಸೂಚಿಸಿ, ಸಂಘದ ಬಾಕಿ ಇರುವ ಎಲ್ಲಾ ವರ್ಷಗಳ ಲೆಕ್ಕಪರಿಶೋಧನೆ ಮಾಡಿಸುವ ಷರತ್ತಿಗೆ ಒಳಪಟ್ಟು, ಮತ್ತು ಸಂಘದ ಸದಸ್ಯರು ಹಾಕಿಕೊಂಡಿರುವ ಕ್ರಿಯಾ ಯೋಜನೆ ಪ್ರಕಾರ ಪ್ರತಿ ಆರು ತಿಂಗಳಿಗೊಮ್ಮೆ ಗುರಿ ಸಾಧನೆಯ ಪ್ರಗತಿ ತ:ಖ್ತೆಯನ್ನು ಈ ಕಚೇರಿಗೂ ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಚೇರಿಗೂ ಸಲ್ಲಿಸುವಂತೆ ಷರತ್ತನ್ನು ವಿಧಿಸಿದೆ. ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಗಣಿಸಿ ಸಂಘವನ್ನು ಪುನ:ಶ್ಚೇತನಗೊಳಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

**ಸಂಖ್ಯೆ:ಡಿಆರ್:ಡಿವಿಜಿ:/ಸಮಾಪನೆ/ಸಿಆರ್–49 /2005–06, ದಿನಾಂಕ:28ನೇ ಫೆಬ್ರವರಿ 2011**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72(3) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69: ಸಿಎಲ್‌ಎಂ:2001, ದಿನಾಂಕ:21–11–2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬಿ. ಕುಬೇರಪ್ಪ, ಕೆ.ಸಿ.ಎಸ್. ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ಆದ ನಾನು ಸಮಾಪನೆಗೊಂಡಿರುವ ಪರಿಶಿಷ್ಟ ಜಾತಿ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ, ಗಾಂಧಿನಗರ, ದಾವಣಗೆರೆ, ಇದರ ಉಲ್ಲೇಖ (1)ರ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಈ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಅವಕಾಶ ಮಾಡುತ್ತಾ ಈ ಮೂಲಕ ಸಂಘವನ್ನು ಈ ಕೆಳಕಂಡ ಷರತ್ತುಗೊಳಪಡಿಸಿ ಪುನ:ಶ್ಚೇತನಕ್ಕಾಗಿ ಆದೇಶಿಸಿರುತ್ತೇನೆ.

**ಷರತ್ತುಗಳು**

1. ಪುನ:ಶ್ಚೇತನಗೊಂಡ 6 ತಿಂಗಳ ಒಳಗಾಗಿ ಲೆಕ್ಕಪರಿಶೋಧನೆ ಮಾಡಿಸಿ ಸದರಿ ವರದಿಯನ್ನು ಈ ಕಚೇರಿಗೆ ಸಲ್ಲಿಸುವುದು.
2. ಕ್ರಿಯಾಯೋಜನಾ ರೀತ್ಯಾ ಕಾರ್ಯಕ್ರಮ ಹಮ್ಮಿಕೊಂಡು ಪ್ರಗತಿ ಸಾಧಿಸುವುದು.
3. ಡಿ.ಡಿ.ಸಿ.ಸಿ. ಬ್ಯಾಂಕ್ ನೊಂದಿಗೆ ವ್ಯವಹಾರ ಮಾಡತಕ್ಕದ್ದು. ಒಂದು ವೇಳೆ ಷರತ್ತಿಗನುಗುಣವಾಗಿ 6 ತಿಂಗಳ ನಂತರ ಯಾವುದೇ ಪ್ರಗತಿ ಸಾಧಿಸದಿದ್ದಲ್ಲಿ ಸಂಘವನ್ನು ನೇರವಾಗಿ ಸಮಾಪನೆಗೊಳಿಸುವುದು.

ಸಂಘದ ಪ್ರಥಮ ಮಹಾಸಭೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ಜರುಗಿಸಲು ಸಂಘದ ಸಮಾಪನಾಧಿಕಾರಿಗೆ ಸೂಚಿಸಿದೆ. ಹಾಗೂ ನೂತನ ಆಡಳಿತ ಮಂಡಳಿಯನ್ನು ರಚಿಸಲು ಶ್ರೀ.ಟಿ. ಚನ್ನಬಸಪ್ಪ, ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು,

